CPMG / KA / BG-GPO/13/2003-2005



# ಕರ್ನಾಟಕ ರಾಜ್ಯ ಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಏಪ್ರಿಲ್ ೨೧, ೨೦೦೫ (ವೈಶಾಖ ೧, ಶಕ ವರ್ಷ ೧೯೨೭) | ಸಂಚಿಕೆ ೧೬ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು**

**ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆಯ ಕ್ರಮಾಂಕ: ಕಗೃಮಂ/ಭೂಸ್ವಾವಿ.6/04-05 ದಿನಾಂಕ: 16ನೇ ಮಾರ್ಚ್ 2005**

ಈ ಅಧಿಸೂಚನೆಯಲ್ಲಿ ನಮೂದಿಸಿರುವ ಜಮೀನುಗಳು ಸಾರ್ವಜನಿಕ ಉದ್ದೇಶಕ್ಕೆ ಅಂದರೆ ಗೃಹ ಮಂಡಳಿಯ ವಸತಿ ಯೋಜನೆಗೆ ಬೇಕಾಗುವುದೆಂದು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ರವರಿಗೆ ಕಂಡುಬಂದಿದೆ.

1991ನೇ ಸಾಲಿನ ಕರ್ನಾಟಕ ಭೂಸ್ವಾಧೀನ ಅಧಿನಿಯಮ 33ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂಸ್ವಾಧೀನ ಅಧಿನಿಯಮ 4(2)ನೆಯ ಪ್ರಕರಣದಲ್ಲಿ ವಿಹಿತವಾದ ಅಧಿಕಾರವನ್ನು ಉಪಯೋಗಿಸಲು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರಿಗೆ ಮತ್ತು ಸಿಬ್ಬಂದಿ ವರ್ಗದವರಿಗೆ ಅಧಿಕಾರ ನೀಡಲಾಗಿದೆ.

ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯೂ ಭೂಸ್ವಾಧೀನದ ಬಗ್ಗೆ ಆಕ್ಷೇಪಣೆಗಳನ್ನು ಮಾಡುವುದಿದ್ದಲ್ಲಿ ಅಂತಹ ಆಕ್ಷೇಪಣೆಗಳನ್ನು ಈ ಅಧಿಸೂಚನೆಯು ಪ್ರಕಟಗೊಂಡ ತಾರೀಖಿನಿಂದ 30 ದಿನಗಳೊಳಗಾಗಿ 1991ನೇ ಇಸವಿ ಕರ್ನಾಟಕ ಭೂ ಸ್ವಾಧೀನ ಅಧಿನಿಯಮ ಕಾಯ್ದೆ 33ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂ ಸಂಗ್ರಹಣ ಅಧಿನಿಯಮದ 3ರ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಗಳ ಪ್ರಶಾಸನ ಕಾರ್ಯಗಳನ್ನು ನಿರ್ವಹಿಸಲು, ನೇಮಕ ಮಾಡಲಾದ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು ರವರಿಗೆ ಲಿಖಿತ ಮೂಲಕ ಅರ್ಜಿಗಳನ್ನು ಸಲ್ಲಿಸತಕ್ಕದ್ದು. ಸದರಿ ಜಮೀನಿನ ಅಧಿಕೃತ ಸಂಗ್ರಹಣೆಗಾಗಿ ನಿಯೋಜಿಸಲ್ಪಟ್ಟ ಯಾವೊಬ್ಬ ಮೋಜಣಿದಾರರು ಅಥವಾ ಬೇರೆ ಯಾವುದೇ ಅಧಿಕಾರಿಗೆ ಅಡಚಣೆಗಳನ್ನುಂಟು ಮಾಡುವುದಾಗಲಿ ಅಥವಾ ಅತಿಕ್ರಮಿಸುವುದಾಗಲೀ ಮಾಡಬಾರದೆಂದು ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಎಲ್ಲರಿಗೂ ಈ ಮೂಲಕ ಎಚ್ಚರಿಕೆ ಕೊಡಲಾಗಿದೆ. ಸದರಿ ಜಮೀನಿನ ವಿಲೇವಾರಿಗಾಗಿ ಮಾರಾಟ ಗುತ್ತಿಗೆ, ಅಡಮಾನ, ಹಸ್ತಾಂತರಣ, ವಿನಿಮಯ ಇನ್ನಾವುದೇ ರೀತಿಯ ಒಪ್ಪಂದಗಳನ್ನು ಅಥವಾ ಯಾವೊಂದು ಅಭಿವೃದ್ಧಿಗಳನ್ನು ಈ ಅಧಿಸೂಚನೆ ಪ್ರಕಟವಾದ ನಂತರ ಗೃಹ ಆಯುಕ್ತರವರ ಮಂಜೂರಾತಿಯನ್ನು ಪಡೆಯದೆ ಮಾಡಿದ ಪಕ್ಷದಲ್ಲಿ ಅಂತಿಮವಾಗಿ ಅಧಿಕೃತ ಸಂಗ್ರಹಣೆ ಮಾಡಲಾಗುವ ಸದರೀ ಜಮೀನಿನ ಅಂತಹ ಭೂ ಪರಭಾರೆಯ ಪರಿಹಾರವನ್ನು ನಿರ್ಧರಿಸುವ ಅಧಿಕಾರಿಯಿಂದ ಸದರಿ ಅಧಿನಿಯಮ 24ನೇ ಪ್ರಕರಣದ ಮೇರೆಗೆ ಉಪೇಕ್ಷಿಸಲಾಗುವುದು.

ಸದರಿ ಜಮೀನಿನ ಒಂದು ನಕ್ಷೆಯನ್ನು ವಿಶೇಷ ಭೂ ಸ್ವಾಧೀನ ಅಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು, ಕಾವೇರಿ ಭವನ ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ವಿಸ್ತೀರ್ಣ | ಆಕಾರ ರೂ.ಪೈ. |
|---|---|---|---|---|---|---|---|---|---|---|
| | | | | | ಪೂರ್ವ ಸರ್ವೆ ನಂ. | ಪಶ್ಚಿಮ ಸರ್ವೆ ನಂ. | ಉತ್ತರ ಸರ್ವೆ ನಂ. | ದಕ್ಷಿಣ ಸರ್ವೆ ನಂ. | | |
| 1. | ಸಿ.ಕೆ. ಮಾಲತಿ ಬಿನ್ ಸಿ. ಕೆಂಪಯ್ಯ, 2ನೇ ಚಿಕ್ಕ ಕೆಂಪಯ್ಯ | ಸಿ.ಕೆ. ಮಾಲತಿ 2ನೇ ಚಿಕ್ಕ ಕೆಂಪಯ್ಯ | 7/1 | ಖುಷ್ಕಿ | ಸರ್ವೆ ನಂ.6 ಕಗೃಮಂ ಆಸ್ತಿ | ಸರ್ವೆ ನಂ.10/1, 7/4 ಕಗೃಮಂ ಆಸ್ತಿ | ರಸ್ತೆ | ಸರ್ವೆ ನಂ. 7/2 ಕಗೃಮಂ ಆಸ್ತಿ | 0-16 | 0-82 |
| 2. | ಸಿ.ಕೆ. ಮಾಲತಿ ಬಿನ್ ಸಿ. ಕೆಂಪಯ್ಯ, 2ನೇ ಚಿಕ್ಕ ಕೆಂಪಯ್ಯ | ಸಿ.ಕೆ. ಮಾಲತಿ 2ನೇ ಚಿಕ್ಕ ಕೆಂಪಯ್ಯ | 7/3 | ಖುಷ್ಕಿ | ಸರ್ವೆ ನಂ.6 ಕಗೃಮಂ ಆಸ್ತಿ | ಸರ್ವೆ ನಂ. 7/4 ಕಗೃಮಂ ಆಸ್ತಿ | ಸರ್ವೆ ನಂ. 7/2 ಕಗೃಮಂ ಆಸ್ತಿ | 536 | 0-36 | 1-83 |

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ವಿಸ್ತೀರ್ಣ | ಆಕಾರ ರೂ.ಪೈ. |
|---|---|---|---|---|---|---|---|---|---|---|
| | | | | | ಪೂರ್ವ ಸರ್ವೆ ನಂ. | ಪಶ್ಚಿಮ ಸರ್ವೆ ನಂ. | ಉತ್ತರ ಸರ್ವೆ ನಂ. | ದಕ್ಷಿಣ ಸರ್ವೆ ನಂ. | | |
| 3. | ಸಿ.ಕೆ. ಮಾಲತಿ ಬಿನ್ ಸಿ. ಕೆಂಪಯ್ಯ, 2ನೇ ಚಿಕ್ಕ ಕೆಂಪಯ್ಯ | ಸಿ.ಕೆ. ಮಾಲತಿ 2ನೇ ಚಿಕ್ಕ ಕೆಂಪಯ್ಯ | 10/1 | ಖುಷ್ಕಿ | ಸರ್ವೆ ನಂ.7/1 | ಸರ್ವೆ ನಂ.10/2 ಮತ್ತು 10/3 ಕಗ್ಗಮಂ ಆಸ್ತಿ | ರಸ್ತೆ | ಸರ್ವೆ ನಂ.7/1 ಖಾತೆದಾರರು | 0-19 | 0-91 |
| | | | ಒಟ್ಟು | | | | | | 1-31 | |

ಪಿ.ಡಿ. 19 ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ-4, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು - 560 029**

**ಪ್ರಕರಣ ಸಂಖ್ಯೆ:ಡಬ್ಲ್ಯುಸಿಎ:ಎಫ್‌ಸಿ:ಸಿಆರ್-11:2005 ದಿನಾಂಕ: 17ನೇ ಮಾರ್ಚ್ 2005**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

1. ಶ್ರೀಮತಿ ವಸಂತಮ್ಮ ಕೋಂ ಲೇಟ್ ಶೇಖರ್
2. ಸುರೇಶ್ ಬಿನ್ ಲೇಟ್ ಶೇಖರ 6 ವರ್ಷ
3. ಗಣೇಶ್ ಬಿನ್ ಲೇಟ್ ಶೇಖರ್ 4 ವರ್ಷ
   ವಿಳಾಸ ಉದಯ್ ಎಲೆಕ್ಟ್ರಿಕಲ್ಸ್, ಹತ್ತಿರ, ಚರ್ಚ್ ಆಸ್ಪತ್ರೆ, M.H.S. ರಸ್ತೆ, ಕನಕಪುರ ಟೌನ್, ಬೆಂ.ರೂ.

ಪ್ರತಿವಾದಿಗಳು:

1. ನಿಸಾರ್ ಅಹಮ್ಮದ್ S/o N.S. ಪಾಷ ನಂ.28, 3ನೇ ಕ್ರಾಸ್, 1ನೇ ಮೈನ್ ರಾಮಕೃಷ್ಣನಗರ, ಬೆಂಗಳೂರು-17.
2. ದಿ ಬ್ರಾಂಚ್ ಮ್ಯಾನೇಜರ್, ದಿ ನ್ಯೂ ಇಂಡಿಯಾ ಅಶೂರೆನ್ಸ್ ಕಂ. ಲಿ., 2ನೇ ಕ್ರಾಸ್, ಅಶೋಕ ನಗರ, ಮಂಡ್ಯ.

**ಪ್ರಕಟಣೆ**

ಅರ್ಜಿದಾರರ ಶ್ರೀಮತಿ ವಸಂತಮ್ಮ ಮತ್ತು ಇತರೆ 2 ಜನ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ಶೇಖರ - ಇವರು ಪ್ರತಿವಾದಿ 1 ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

**ರಾಮಯ್ಯ**

ಪಿ.ಆರ್. 577 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪ ವಿಭಾಗ-4, ಬೆಂಗಳೂರು.

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು-560 001**

**ಸುತ್ತೋಲೆ ಸಂಖ್ಯೆ:ಕರಾಆ/ಆಡಳಿತ/02/2005 ದಿನಾಂಕ: 23ನೇ ಮಾರ್ಚ್ 2005**

**ವಿಷಯ:** ಗ್ರಾಹಕರ ಸಂರಕ್ಷಣಾ ಕಾಯ್ದೆ 1986ರ ಕಲಂ 12ರಡಿಯಲ್ಲಿ ಸಲ್ಲಿಸಲ್ಪಡುವ ಫಿರ್ಯಾದುಗಳಿಗೆ ಶುಲ್ಕವನ್ನು ಸಂಗ್ರಹಿಸುವ ಬಗ್ಗೆ.

**ಉಲ್ಲೇಖ:**
1. ಭಾರತ ಸರ್ಕಾರದ ಗ್ರಾಹಕ ವ್ಯವಹಾರಗಳು, ಆಹಾರ ಮತ್ತು ಸಾರ್ವಜನಿಕ ವಿತರಣಾ ಸಚಿವಾಲಯ, ಗ್ರಾಹಕರ ವ್ಯವಹಾರಗಳ ಇಲಾಖೆಯ ಪತ್ರ ಸಂಖ್ಯೆ: 10(02)2003-ಸಿಪಿಯು ದಿನಾಂಕ:11.02.2005.
2. ರಾಜ್ಯ ಆಯೋಗದ ಸಮ ಸಂಖ್ಯೆಯ ಪತ್ರ ದಿನಾಂಕ: 22.02.2005.
3. ಕರ್ನಾಟಕ ಸ್ಟೇಟ್ ಫೆಡರೇಷನ್ ಆಫ್ ಕನ್ಸ್ಯೂಮರ್ಸ್ ಆರ್ಗನೈಜೇಷನ್ ಇವರ ಪತ್ರ ದಿನಾಂಕ: 14.03.2005.

ಗ್ರಾಹಕರ ಸಂರಕ್ಷಣಾ ಕಾಯ್ದೆ 1986ರ ಕಲಂ.12ರಡಿಯಲ್ಲಿ ಸಲ್ಲಿಸಲಾಗುವ ಫಿರ್ಯಾದುಗಳಿಗೆ ಶುಲ್ಕವನ್ನು ವಿತರಿಸುವ ಬಗ್ಗೆ ಕೇಂದ್ರ ಸರ್ಕಾರವು ತೀರ್ಮಾನ ತೆಗೆದುಕೊಂಡು ಕನ್ಸ್ಯೂಮರ್ ಪ್ರೊಟೆಕ್ಷನ್ ರೂಲ್ಸ್ 1987ಕ್ಕೆ ನಿಯಮವನ್ನು ಸೇರಿಸಿದ್ದು, ಅದೇ ರೀತಿ ನಿಯಮವನ್ನು ರಾಜ್ಯ ಗ್ರಾಹಕರ ಸಂರಕ್ಷಣಾ ನಿಯಮಗಳಿಗೆ ಸೇರಿಸುವ ಬಗ್ಗೆ ಪರಿಗಣಿಸುವಂತೆ ಉಲ್ಲೇಖ (1)ರಲ್ಲಿ ಓದಲಾಗುವ ಪತ್ರದಲ್ಲಿ ತಿಳಿಸಿದ್ದು, ಸದರೀ ಪತ್ರವನ್ನು ಅನುಸರಿಸಿಕೊಂಡು ಉಲ್ಲೇಖ (2)ರಲ್ಲಿ ಓದಲಾಗುವ ಪತ್ರದ ಮೂಲಕ, ಕರ್ನಾಟಕ ಗ್ರಾಹಕರ ಸಂರಕ್ಷಣಾ ನಿಯಮ 1988ಕ್ಕೆ ಗ್ರಾಹಕರ ಸಂರಕ್ಷಣಾ ನಿಯಮ 1987ರಡಿಯಲ್ಲಿ ದಿನಾಂಕ:10.02.2005ರ ಭಾರತ ರಾಜ್ಯ ಪತ್ರದ ಮೂಲಕ ತಂದಿರುವ ತಿದ್ದುಪಡಿಯನ್ನು ಅಳವಡಿಸಿಕೊಳ್ಳುವ ಬಗ್ಗೆ ಅಥವಾ ತಿದ್ದುಪಡಿ ಮಾಡುವ ಬಗ್ಗೆ ಪರಿಗಣಿಸುವಂತೆ ಸರ್ಕಾರವನ್ನು ಕೋರಲಾಗಿದೆ.

ದಿನಾಂಕ: 10.02.2005ರ ಭಾರತ ರಾಜ್ಯ ಪತ್ರದ ಮೂಲಕ ಗ್ರಾಹಕರ ಸಂರಕ್ಷಣಾ ನಿಯಮಗಳು 1987ಕ್ಕೆ ತಂದಿರುವ ತಿದ್ದುಪಡಿಗಳನ್ನು, ಕರ್ನಾಟಕ ರಾಜ್ಯ ಸರ್ಕಾರವು, ಗ್ರಾಹಕರ ಸಂರಕ್ಷಣಾ ನಿಯಮಗಳು 1988ಕ್ಕೆ ಅಳವಡಿಸಿಕೊಳ್ಳುವ ಬಗ್ಗೆ ಪರಿಗಣಿಸಿ ಸೂಕ್ತ ನಿಯಮಗಳನ್ನು ರಚಿಸುವವರೆಗೆ, ಜಿಲ್ಲಾ ವೇದಿಕೆಗಳು ತಮ್ಮಲ್ಲಿ ಸ್ವೀಕರಿಸುವಂತಹ ಫಿರ್ಯಾದುಗಳಿಗೆ ಅಥವಾ ಗ್ರಾಹಕರ ಸಂರಕ್ಷಣಾ ಕಾಯ್ದೆ 1986ರ ಕಲಂ.11, 12ರ ಅಡಿಯಲ್ಲಿ ಸಲ್ಲಿಸುವ ಫಿರ್ಯಾದುಗಳಿಗೆ ಶುಲ್ಕವನ್ನು ತೆಗೆದುಕೊಳ್ಳದಂತೆ ಸೂಚಿಸಿದೆ.

**ನ್ಯಾಯಮೂರ್ತಿ ಚಂದ್ರಶೇಖರಯ್ಯ**

ಪಿ.ಆರ್. 525 ಅಧ್ಯಕ್ಷರು, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬೆಂಗಳೂರು.

**ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳ ಕಾರ್ಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ನಡವಳಿಕೆಗಳು**

**ವಿಷಯ:** ಚಿತ್ರದುರ್ಗ ಜಿಲ್ಲೆಯ ವಿವಿಧ ರಾಜ್ಯ ಹೆದ್ದಾರಿ, ಜಿಲ್ಲಾ ಮುಖ್ಯ ರಸ್ತೆಗಳಲ್ಲಿ ಅಧಿಕ ಭಾರ ಹೊತ್ತು ಸಾಗುವ ಸಾಗಾಣಿಕೆ ವಾಹನಗಳ ಸಂಚಾರ ನಿರ್ಬಂಧಿಸುವ ಬಗ್ಗೆ.

**ಉಲ್ಲೇಖ:**
1. ಕಾರ್ಯಪಾಲಕ ಅಭಿಯಂತರರು, ಪಿ.ಡಬ್ಲ್ಯೂ.ಡಿ, ಚಿತ್ರದುರ್ಗ ಇವರ ಪತ್ರ ಸಂ.ಕಾಪಾಇಂ/ಲೋಎ/ಚಿವಿ/ಸಇಂ/ಅಧಿಕ ಭಾರದ ವಾಹನಗಳು/ 04-05 /2876/ದಿ.19.2.05.
2. ಸಭಾ ನಡವಳಿಕೆಗಳು ದಿ.18.1.2005, 17.2.2005 ಮತ್ತು 16.3.2005.
3. ಈ ಕಛೇರಿಯ ನಡವಳಿಕೆಗಳು ಸಂ.ಐ.ಎಸ್.ಎನ್.ಡಿ. ಸಿಆರ್.42/04-05 ದಿ.4.2.05.

**ಪ್ರಸ್ತಾವನೆ:**

ಚಿತ್ರದುರ್ಗ ಜಿಲ್ಲೆಯಲ್ಲಿ ಪ್ರಮುಖವಾಗಿ ಹೊಸದುರ್ಗ, ಹೊಳಲ್ಕೆರೆ ತಾಲ್ಲೂಕುಗಳಲ್ಲಿ ಮತ್ತು ಭಾಗಶಃ ಚಿತ್ರದುರ್ಗ ತಾಲ್ಲೂಕಿನಲ್ಲಿ ಮ್ಯಾಂಗನೀಸ್ ಅದಿರು ಸೇರಿದಂತೆ ವಿವಿಧ ರೀತಿಯ ಗಣಿಗಾರಿಕೆಗಳು ಇತ್ತೀಚಿನ ಒಂದೂವರೆ ವರ್ಷದಲ್ಲಿ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ನಡೆಯುತ್ತಿದ್ದು, ಗಣಿಗಾರಿಕೆ ಪ್ರದೇಶಗಳಿಂದ ಈ ಸರಕನ್ನು ವಾಹನಗಳ ಸಾಮರ್ಥ್ಯಕ್ಕಿಂತ ಹೆಚ್ಚಾಗಿ ತುಂಬಿಕೊಂಡು ಮಂಗಳೂರು ಕಡೆಗೆ ಸಾಗಾಣಿಕೆ ಮಾಡುತ್ತಿರುವುದರಿಂದ ಅಸಾಮಾನ್ಯ ಭಾರದ ಅಕ್ರಮ ಸಾಗಾಣಿಕೆಯಿಂದ ರಸ್ತೆಗಳು ಕುಸಿದು ಸಂಚಾರಕ್ಕೆ ಸಂಪೂರ್ಣವಾಗಿ ಅನರ್ಹವಾಗಿರುವುದರಿಂದ ಮತ್ತು ರಸ್ತೆಗಳಲ್ಲಿ ಬರುವ ಹಲವಾರು ಸೇತುವೆಗಳು ಶಿಥಿಲವಾಗಿರುವುದರಿಂದ ಯಾವುದೇ ಕ್ಷಣದಲ್ಲಿ ಸೇತುವೆಗಳು, ಮೋರಿಗಳು ಕುಸಿದು ಬೀಳುವ ಶಂಕೆಯನ್ನು ಹಲವಾರು ಸಂಘ ಸಂಸ್ಥೆಗಳು, ಸಾರ್ವಜನಿಕರು, ಗ್ರಾಮಸ್ಥರು ಅಲ್ಲದೇ ರೈತ ಸಂಘದ ಪ್ರತಿನಿಧಿಗಳು ಹಲವಾರು ಬಾರಿ ಈ ವಿಚಾರದಲ್ಲಿ ಪ್ರತಿಭಟನೆ ಮಾಡಿರುತ್ತಾರೆ.

ಶ್ರೀ ಬಿ.ಜಿ. ಗೋವಿಂದಪ್ಪ, ಮಾನ್ಯ ಶಾಸಕರು (ವಿಧಾನ ಸಭೆ), ಹೊಸದುರ್ಗ ಕ್ಷೇತ್ರ ಇವರೂ ಸಹ ಅಕ್ರಮ ಗಣಿಗಾರಿಕೆ ಮತ್ತು ಅಧಿಕ ಭಾರದ ಲಾರಿಗಳ ಓಡಾಟದ ಹಾಗೂ ಅದರಿಂದ ಉಂಟಾಗುತ್ತಿರುವ ರಸ್ತೆಗಳ ದುಸ್ಥಿತಿ ವಿರುದ್ಧ ಹಲವಾರು ಬಾರಿ ಪ್ರದರ್ಶನಗಳನ್ನು ಮಾಡಿ ತಮ್ಮ ವಿರೋಧವನ್ನು ವ್ಯಕ್ತಪಡಿಸಿರುತ್ತಾರೆ.

ಗಣಿಗಾರಿಕೆಯಿಂದ ಉತ್ಪತ್ತಿಯಾಗುವ ಖನಿಜಗಳನ್ನು ಸಾಮರ್ಥ್ಯಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಲೋಡ್ ಮಾಡಿಕೊಂಡು ಸಂಚರಿಸುವ ವಾಹನಗಳಿಂದ ಈ ಕೆಳಗಿನ ರಸ್ತೆಗಳು ಅಪಾಯಕರ ಸ್ಥಿತಿ ತಲುಪಿವೆ ಎಂದು ವಿವರಗಳನ್ನು ಕಾರ್ಯಪಾಲಕ ಅಭಿಯಂತರರು, ಪಿ.ಡಬ್ಲ್ಯೂ.ಡಿ, ಚಿತ್ರದುರ್ಗ ಇವರು ವರದಿ ಮಾಡಿ ಇಂತಹ ವಾಹನಗಳ ಸಂಚಾರವನ್ನು ನಿರ್ಬಂಧಿಸುವಂತೆ ಮನವಿ ಮಾಡಿರುತ್ತಾರೆ.

ಅವರು ತಮ್ಮ ಪತ್ರ ಸಂ.ಕಾಪಾಅ/ಲೋಇ/ಚಿವಿ/ಸಇ/ಅಧಿಕ ಭಾರದ ವಾಹನಗಳು/04-05/2876 ದಿ:19.2.05 ರಲ್ಲಿ ಈ ಕೆಳಕಂಡ ರಸ್ತೆ ಮತ್ತು ಸೇತುವೆಗಳು ಅಪಾಯ ಮಟ್ಟ ತಲುಪಿವೆ. ಅಲ್ಲದೆ ಈ ರಸ್ತೆಗಳು ಹಾಗೂ ಸೇತುವೆಗಳು ಅವುಗಳ ರಚನೆ ಹಾಗೂ ಈಗ ಇರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ 15 ಟನ್‌ಗಳ ಭಾರಕ್ಕಿಂತ ಹೆಚ್ಚಿನ ಭಾರವನ್ನು ತಡೆದುಕೊಳ್ಳುವ ಸಾಮರ್ಥ್ಯ ಹೊಂದಿಲ್ಲದಿರುವುದರಿಂದ ಮತ್ತು ತಾಂತ್ರಿಕ ದೃಷ್ಟಿಯಿಂದ ಇವುಗಳ ಮೇಲೆ ಅಧಿಕ ಭಾರದ ಲಾರಿಗಳ ಸಂಚಾರವನ್ನು ತಡೆಗಟ್ಟಬೇಕೆಂದು ತಮ್ಮ ವರದಿಯನ್ನು ಸಲ್ಲಿಸಿರುತ್ತಾರೆ.

**ಚಿತ್ರದುರ್ಗ ಜಿಲ್ಲೆಯಲ್ಲಿ ಅಧಿಕ ಭಾರ ಸಾಗಿಸುತ್ತಿರುವ ಮೈನಿಂಗ್ ಲಾರಿಗಳು ಸಂಚರಿಸುತ್ತಿರುವ ರಸ್ತೆಗಳ ವಿವರ:-**

ಚಿತ್ರದುರ್ಗ ಜಿಲ್ಲೆಯಲ್ಲಿ ನಡೆಯುತ್ತಿರುವ ಗಣಿಗಾರಿಕೆಯ ವಾಹನಗಳು ಸಂಚರಿಸುವ ರಸ್ತೆಗಳು:-

| ಕ್ರ. ಸಂ. | ರಸ್ತೆಯ ಹೆಸರು | ರಸ್ತೆಯ ವರ್ಗ | ರಸ್ತೆ ಹಾದು ಹೋಗುವ ತಾಲ್ಲೂಕು | ಅಧಿಕ ಭಾರದ ವಾಹನಗಳು ಓಡಾಡುತ್ತಿರುವ ರಸ್ತೆಯ ಉದ್ದ ಕಿ.ಮೀ.ಗಳಲ್ಲಿ |
|---|---|---|---|---|
| 1. | ಹುಳಿಯಾರು-ಆನಗೋಡು ರಸ್ತೆ | ರಾಜ್ಯ ಹೆದ್ದಾರಿ | ಹೊಸದುರ್ಗ<br>ಹೊಳಲ್ಕೆರೆ | 46.20 (9.80 ರಿಂದ 56.00)<br>37 (56.00 ರಿಂದ 93.00) |
| 2. | ಕುಮಟ-ಕೊಡಮಡಗು ರಸ್ತೆ | ರಾಜ್ಯ ಹೆದ್ದಾರಿ | ಹೊಳಲ್ಕೆರೆ | 9.60 (237.00 ರಿಂದ 246.60) |
| 3. | ತರೀಕೆರೆ-ಹಿರಿಯೂರು-ವಿ.ವಿ.ಪುರ-ಧರ್ಮಪುರ ರಸ್ತೆ | ರಾಜ್ಯ ಹೆದ್ದಾರಿ | ಹೊಸದುರ್ಗ | 43.40 (33.40 ರಿಂದ 76.80) |
| 4. | ಹಿರೇಬೆನ್ನೂರು-ಸಿರಿಗೆರೆ-ಸಾಸಲು ರಸ್ತೆ | ಜಿಲ್ಲಾ ಮುಖ್ಯರಸ್ತೆ | ಹೊಳಲ್ಕೆರೆ | 9.20 (12.40 ರಿಂದ 21.60) |
| 5. | ಅಮೃತಾಪುರ-ಮಾಡದಕೆರೆ ರಸ್ತೆ | ಜಿಲ್ಲಾ ಮುಖ್ಯರಸ್ತೆ | ಹೊಳಲ್ಕೆರೆ<br>ಹೊಸದುರ್ಗ | 22.00 (0.00 ರಿಂದ 22.00)<br>11.60 (22.00 ರಿಂದ 33.60) |
| 6. | ಹಾಗಲಕೆರೆ-ಮತ್ತೋಡು-ಚಿಕ್ಕಬ್ಯಾಲದಕೆರೆ ರಸ್ತೆ | ಜಿಲ್ಲಾ ಮುಖ್ಯರಸ್ತೆ | ಹೊಸದುರ್ಗ | 32.20 (0.00 ರಿಂದ 32.20) |
| 7. | ಹಾಗಲಕೆರೆ-ಬೆಲಗೂರು-ಮರವಂಜಿ ರಸ್ತೆ | ಜಿಲ್ಲಾ ಮುಖ್ಯರಸ್ತೆ | ಹೊಸದುರ್ಗ | 16.00 (0.00 ರಿಂದ 16.00) |
| 8. | ಬೆಲಗೂರು-ತಿಮ್ಲಾಪುರ ರಸ್ತೆ | ಜಿಲ್ಲಾ ಮುಖ್ಯರಸ್ತೆ | ಹೊಸದುರ್ಗ | 6.40 (0.00 ರಿಂದ 6.40) |
| **ಬೇರೆ ಜಿಲ್ಲೆಗಳಲ್ಲಿ ನಡೆಯುತ್ತಿರುವ ಗಣಿಗಾರಿಕೆಯ ವಾಹನಗಳು ಸಂಚರಿಸುವ ರಸ್ತೆಗಳು** | | | | |
| 1. | ಚಳ್ಳಕೆರೆ-ಮೈಲಾನಹಳ್ಳಿ-ಓಬಳಾಪುರ ರಸ್ತೆ | ಜಿಲ್ಲಾ ಮುಖ್ಯರಸ್ತೆ | ಚಳ್ಳಕೆರೆ | 5.40 (41.00 ರಿಂದ 45.40) |
| 2. | ಮೀರಾಸಾಬೀಹಳ್ಳಿ ಜಾಜೂರು-ಓಬಳಾಪುರ ರಸ್ತೆ | ಜಿಲ್ಲಾ ಮುಖ್ಯರಸ್ತೆ | ಚಳ್ಳಕೆರೆ | 33.60 (0.00 ರಿಂದ 33.60) |
| 3. | ಕುಮಟಾ-ಕೊಡಮಡುಗು ರಸ್ತೆ | ರಾಜ್ಯ ಹೆದ್ದಾರಿ | ಚಳ್ಳಕೆರೆ ಚಿತ್ರದುರ್ಗ | 23.60 (310.60 ರಿಂದ 287.00)<br>14.60 (287.00 ರಿಂದ 272.40) |
| 4. | ಹುಳಿಯಾರು-ಆನಗೋಡು ರಸ್ತೆ | ರಾಜ್ಯ ಹೆದ್ದಾರಿ | ಹೊಳಲ್ಕೆರೆ<br>ಹೊಸದುರ್ಗ | 15.20 (71.20 ರಿಂದ 56.00)<br>15.00 (56.00 ರಿಂದ 41.00) |
| 5. | ತರೀಕೆರೆ-ಹೊಸದುರ್ಗ-ಹಿರಿಯೂರು-ವಿ.ವಿ.ಪುರ-ಹಿರಿಯೂರು-ಧರ್ಮಪುರ ರಸ್ತೆ | ರಾಜ್ಯ ಹೆದ್ದಾರಿ | ಹೊಸದುರ್ಗ | 16.00 (49.00 ರಿಂದ 33.00) |

ಕಾರ್ಯಪಾಲಕ ಅಭಿಯಂತರರು, ಪಿ.ಡಬ್ಲ್ಯೂ.ಡಿ. ಚಿತ್ರದುರ್ಗ ಇವರು ನೀಡಿರುವ ವಿವರಗಳನ್ನು ದಿ:16.3.05ರಂದು ನಡೆದ ಸಭೆಯಲ್ಲಿ ಪೊಲೀಸ್ ಅಧೀಕ್ಷಕರು, ಉಪ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ ಮತ್ತು ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ, ಚಿತ್ರದುರ್ಗ ಹಾಗೂ ತಹಶೀಲ್ದಾರ್, ಹೊಳಲ್ಕೆರೆ/ಹೊಸದುರ್ಗ, ಇವರೆಲ್ಲರೊಂದಿಗೆ ಸುದೀರ್ಘವಾಗಿ ಚರ್ಚಿಸಲಾಯಿತು. ಮತ್ತು ಅಧಿಕ ಭಾರದ ಅಕ್ರಮ ಸಾಗಾಣಿಕೆಯ ವಾಹನಗಳ ಸಂಚಾರದಿಂದ ರಸ್ತೆಗಳು ಮತ್ತು

ಸೇತುವೆಗಳು ಈಗ ಸಂಪೂರ್ಣ ಹಾಳಾಗಿರುವುದು ಮತ್ತು ಶಿಥಿಲಗೊಂಡಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮುಂದೆ ಯಾವುದೇ ಕ್ಷಣದಲ್ಲಿ ಸಂಭವಿಸಬಹುದಾದ ಭಾರಿ ಅಪಘಾತಗಳನ್ನು ತಡೆಯಲು ಮತ್ತು ಈಗಿನ ರಸ್ತೆಗಳು ಮತ್ತು ಸೇತುವೆಗಳ ಸ್ಥಿತಿಯನ್ನು ಇನ್ನೂ ಹೆಚ್ಚಿಗೆ ಹಾಳಾಗದಂತೆ ತಡೆಯುವ ದೃಷ್ಠಿಯಿಂದ ಈ ಕೆಳಗಿನಂತೆ ವಾಹನ ಸಂಚಾರ ನಿಷೇಧ ಆದೇಶವನ್ನು ಹೊರಡಿಸಬೇಕೆಂದು ತೀರ್ಮಾನಿಸಲಾಯಿತು. ಈ ತೀರ್ಮಾನದ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಐ.ಎನ್.ಡಿ.ಸಿಆರ್.42/2004-05, ದಿನಾಂಕ: 17ನೇ ಮಾರ್ಚ್ 2005**

ಕೇಂದ್ರ ಮೋಟಾರು ವಾಹನಗಳ ಕಾಯ್ದೆ 1988ರ ಕಲಂ 115 ಹಾಗೂ ಕರ್ನಾಟಕ ಮೋಟಾರು ವಾಹನಗಳ ನಿಯಮಾವಳಿಗಳು 1989ರ ನಿಯಮ 221(ಎ)(5) ಹಾಗೂ ಕರ್ನಾಟಕ ರಾಜ್ಯ ಹೆದ್ದಾರಿ ಕಾಯ್ದೆ 1964ರ ಕಲಂ 51ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಎಸ್.ಆರ್. ಉಮಾಶಂಕರ್, ಭಾ.ಆ.ಸೇ, ಜಿಲ್ಲಾ ದಂಡಾಧಿಕಾರಿಗಳು ಮತ್ತು ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ಆದ ನಾನು ಈ ಕೆಳಗಿನ ಷೆಡ್ಯೂಲ್‌ನಲ್ಲಿ ತೋರಿಸಿರುವಂತೆ ಚಿತ್ರದುರ್ಗ ಜಿಲ್ಲೆಯ ವ್ಯಾಪ್ತಿಯ ಒಳಗಡೆ ವಿವಿಧ ರಸ್ತೆಗಳಲ್ಲಿ ಸಂಚರಿಸುವ ವಾಹನಗಳಿಗೆ ಸಂಬಂಧಿಸಿದಂತೆ ಪೂರ್ಣ ನಿಷೇಧ ಮತ್ತು ನಿರ್ಬಂಧವನ್ನು ಆಯಾ ರಸ್ತೆಗಳ ಪರಿಸ್ಥಿತಿಗೆ ಅನುಗುಣವಾಗಿ ಮುಂದಿನ ಆದೇಶದವರೆಗೆ ದಿ:25.3.2005 ರಿಂದ ಜಾರಿಗೆ ಬರುವಂತೆ ಘೋಷಿಸಿರುತ್ತೇನೆ.

**ಷೆಡ್ಯೂಲ್-1**

ಕೆಳಗಿನ ರಸ್ತೆಗಳಲ್ಲಿ ಅವುಗಳ ಎದುರಿಗೆ ತೋರಿಸಿರುವ ಭಾಗಗಳಲ್ಲಿ ಅದಿರು ತುಂಬಿದ ಲಾರಿಗಳ ಓಡಾಟವನ್ನು ಸಂಪೂರ್ಣವಾಗಿ ನಿಷೇಧಿಸಲಾಗಿದೆ.

| ಕ್ರ. ಸಂ. | ರಸ್ತೆಯ ವಿವರ | ರಸ್ತೆಯ ವರ್ಗೀಕರಣ | ಎಲ್ಲಿಂದ ಎಲ್ಲಿಗೆ ಮತ್ತು ಒಟ್ಟು ಉದ್ದ ಕಿ.ಮೀ. | |
|---|---|---|---|---|
| 1. | ಶ್ರೀರಂಗಪಟ್ಟಣ-ಬೀದರ್ ರಸ್ತೆ | ರಾಜ್ಯ ಹೆದ್ದಾರಿ | 153.20 | (162.70 ರಿಂದ 315.90) |
| 2. | ಹಿರಿಯೂರು-ವಿ.ವಿ. ಪುರ ರಸ್ತೆ | ರಾಜ್ಯ ಹೆದ್ದಾರಿ | 22.20 | (76.80 ರಿಂದ 99.00) |
| 3. | ಹೊಸದುರ್ಗ-ಕೆಲ್ಲೋಡು ರಸ್ತೆ | ರಾಜ್ಯ ಹೆದ್ದಾರಿ | 31.20 | (9.80 ರಿಂದ 41.00) |
| 4. | ಚಿತ್ರದುರ್ಗ-ಚಳ್ಳಕೆರೆ-ಓಬಳಾಪುರ ರಸ್ತೆ | ರಾಜ್ಯ ಹೆದ್ದಾರಿ | 76.80 | (272.00 ರಿಂದ 348.80) |

**ಷೆಡ್ಯೂಲ್-2**

ಈ ಕೆಳಕಂಡ ರಸ್ತೆಗಳಲ್ಲಿ 15 ಟನ್‌ಗೂ ಮೇಲ್ಪಟ್ಟು ಭಾರವಿರುವ ಸರಕು ಸಾಗಾಣಿಕೆ ವಾಹನಗಳ ಸಂಚಾರವನ್ನು ನಿರ್ಬಂಧಿಸಲಾಗಿದೆ. ಅದರಂತೆ 2 ಆ್ಯಕ್ಸಲ್ (ಅಚ್ಚು)ಗಳಿಗಿಂತ ಹೆಚ್ಚಿನ ಅಚ್ಚುಗಳಿರುವ ವಾಹನಗಳ ಸಂಚಾರವನ್ನು ಸಂಪೂರ್ಣವಾಗಿ ನಿರ್ಬಂಧಿಸಲಾಗಿದೆ.

| ಕ್ರ. ಸಂ. | ರಸ್ತೆಯ ವಿವರ | ರಸ್ತೆಯ ವರ್ಗೀಕರಣ | ಎಲ್ಲಿಂದ ಎಲ್ಲಿಗೆ ಮತ್ತು ಒಟ್ಟು ಉದ್ದ ಕಿ.ಮೀ. | |
|---|---|---|---|---|
| 1. | ಹುಳಿಯಾರು-ಆನಗೋಡು ರಸ್ತೆ | ರಾಜ್ಯ ಹೆದ್ದಾರಿ | 46.20 | (9.80 ರಿಂದ 56.00) |
| | | | 37.00 | (56.00 ರಿಂದ 93.00) |
| 2. | ಕುಮಟ-ಕೊಡಮಡಗು ರಸ್ತೆ | ರಾಜ್ಯ ಹೆದ್ದಾರಿ | 9.60 | (237.00 ರಿಂದ 246.60) |
| 3. | ತರೀಕೆರೆ-ಹಿರಿಯೂರು-ವಿ.ವಿ.ಪುರ-ಧರ್ಮಪುರ ರಸ್ತೆ | ರಾಜ್ಯ ಹೆದ್ದಾರಿ | 43.40 | (33.40 ರಿಂದ 76.80) |
| 4. | ಹಿರೇಬೆನ್ನೂರು-ಸಿರಿಗೆರೆ-ಸಾಸಲು ರಸ್ತೆ | ಜಿಲ್ಲಾ ಮುಖ್ಯ ರಸ್ತೆ | 9.20 | (12.40 ರಿಂದ 21.60) |
| 5. | ಅಮೃತಾಪುರ-ಮಾಡದಕೆರೆ ರಸ್ತೆ | ಜಿಲ್ಲಾ ಮುಖ್ಯ ರಸ್ತೆ | 22.00 | (00 ರಿಂದ 22.00) |
| | | | 11.60 | (22.00 ರಿಂದ 33.60) |
| 6. | ಹಾಗಲಕೆರೆ-ಮತ್ತೋಡು-ಚಿಕ್ಕಬ್ಯಾಲದಕೆರೆ ರಸ್ತೆ | ಜಿಲ್ಲಾ ಮುಖ್ಯ ರಸ್ತೆ | 32.20 | (0.00 ರಿಂದ 32.20) |
| 7. | ಹಾಗಲಕೆರೆ-ಬೆಲಗೂರು-ಮರವಂಜಿ ರಸ್ತೆ | ಜಿಲ್ಲಾ ಮುಖ್ಯ ರಸ್ತೆ | 16.00 | (0.00 ರಿಂದ 16.00) |
| 8. | ಬೆಲಗೂರು-ತಿಮ್ಮಾಪುರ ರಸ್ತೆ | ಜಿಲ್ಲಾ ಮುಖ್ಯ ರಸ್ತೆ | 6.40 | (0.00 ರಿಂದ 6.40) |
| 9. | ಚಳ್ಳಕೆರೆ-ಮೈಲಾನಹಳ್ಳಿ ಓಬಳಾಪುರ ರಸ್ತೆ | ಜಿಲ್ಲಾ ಮುಖ್ಯ ರಸ್ತೆ | 5.40 | (41.00 ರಿಂದ 46.40) |
| 10. | ಮೀರಾಸಾಬೀಹಳ್ಳಿ-ಜಾಜೂರು-ಓಬಳಾಪುರ ರಸ್ತೆ | ಜಿಲ್ಲಾ ಮುಖ್ಯ ರಸ್ತೆ | 33.60 | (0.00 ರಿಂದ 33.60) |
| 11. | ಕುಮಟಾ-ಕೊಡಮಡುಗು ರಸ್ತೆ | ರಾಜ್ಯ ಹೆದ್ದಾರಿ | 23.60 | (310.60 ರಿಂದ 287.00) |
| | | | 14.60 | (287.00 ರಿಂದ 72.40) |
| 12. | ಹುಳಿಯಾರು-ಆನಗೋಡು ರಸ್ತೆ | ರಾಜ್ಯ ಹೆದ್ದಾರಿ | 15.20 | (71.20 ರಿಂದ 56.00) |
| | | | 15.00 | (56.00 ರಿಂದ 41.00) |
| 13. | ತರೀಕೆರೆ-ಹೊಸದುರ್ಗ-ಹಿರಿಯೂರು-ವಿ.ವಿ. ಪುರ-ಹಿರಿಯೂರು-ಧರ್ಮಪುರ ರಸ್ತೆ | ರಾಜ್ಯ ಹೆದ್ದಾರಿ | 16.00 | (49.00 ರಿಂದ 33.00) |

**ಎಸ್.ಆರ್. ಉಮಾಶಂಕರ್**

ಪಿ.ಆರ್. 526 ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ.ಜಿಲ್ಲೆ, ಬೆಂದೂರ್‌ವೆಲ್ ವೃತ್ತ, ಮಂಗಳೂರು-2, ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಡಬ್ಲ್ಯೂಸಿಎ:ಸಿಆರ್-5/05 R ದಿನಾಂಕ: 27ನೇ ಮಾರ್ಚ್ 2005**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

ಅರ್ಜಿದಾರರು:

1. ಶ್ರೀಮತಿ ಹಾಜಿರಾ ವೈಫ್ ಆಫ್ ದಿ ರಜಾಕ್ (2) ಬೇಬಿ ನಸೀಮಾ (3) ನಜೀರ್ (4) ಕೆ. ಇಬ್ರಾಹಿಂ (5) ಶ್ರೀಮತಿ ಸಾರಮ್ಮ ಜನತಾ ಕಾಲೋನಿ ಕಣಿಯೂರ್ ಬೆಳ್ತಂಗಡಿ

ಪ್ರತಿವಾದಿಗಳು:

1. ಶ್ರೀ ಎಂ. ಮೋನಪ್ಪ ಗೌಡ ಬಿನ್ ದಿ ಕಾಂಟಪ್ಪ ಗೌಡ ಮಂಜುಶ್ರೀ ನಿಲಯ ಕರಾಯ ಗ್ರಾಮ ಬೆಳ್ತಂಗಡಿ ತಾಲ್ಲೂಕು ಬೆಳ್ತಂಗಡಿ
2. ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಪುತ್ತೂರು ತಾಲ್ಲೂಕು

**ಅಧಿಸೂಚನೆ**

ಅರ್ಜಿದಾರನಾದ:ಅರ್ಜಿದಾರಳಾದ ಶ್ರೀಮತಿ:ಶ್ರೀ ಹಾಜರಾ ಇವರು ತಮ್ಮ ಗಂಡನಾದ ಶ್ರೀ ರಯೋಕ್ ಅಬ್ದುಲ್ ರಯೋಕ್ ಇವರು 1ನೇ ಪ್ರತಿವಾದಿಗಳಾದ ಶ್ರೀ ಎಂ. ಮೋನಪ್ಪಗೌಡ ಇವರ ಲಾರಿಯಲ್ಲಿ ಕ್ಲೀನರ್ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾರೆ, ದಿನಾಂಕ 19.2.05 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದಗೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

ಪಿ.ಆರ್. 527 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪವಿಭಾಗ ದ.ಕ. ಜಿಲ್ಲೆ, ಮಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ.ಜಿಲ್ಲೆ, ಬೆಂದೂರ್‌ವೆಲ್ ವೃತ್ತ, ಮಂಗಳೂರು-2, ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಡಬ್ಲ್ಯೂಸಿಎ:ಸಿಆರ್-6/2005 F ದಿನಾಂಕ: 22ನೇ ಮಾರ್ಚ್ 2005**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಶ್ರೀಮತಿ ಹರಿಣಾಕ್ಷಿ ಎಂ. ಕೋಂ ದಿ:ದುಗ್ಗಪ್ಪ ಸಪಾಲ್ಯ
2. ಕು:ಧನಲಕ್ಷ್ಮಿ (ಮೈನರ್) ಬಿನ್ ದಿ:ದುಗ್ಗಪ್ಪ ಸಪಾಲ್ಯ
ಮೇಲ್ಕಂಡವರ ವಾಸ:
ಕೇರಾಫ್ ಗಂಗಾಧರ್, ನಂ.25.6.373, ಉಜ್ಜೋಡಿ ಹೌಸ್, ಗೋರಿಗುಡ್ಡ, ಕಂಕನಾಡಿ, ಮಂಗಳೂರು-2

1. ಶ್ರೀ ಮುಕೇಶ್ ಕುಮಾರ್ ದಾಸ್ ಬಿನ್ ಶ್ರೀ ಸಂತೋಷ್‌ಕುಮಾರ್ ದಾಸ್ ಲಾರಿ ಮಾಲೀಕರು, ಮಂಜಲ್‌ಬೈಲ್, ಸಿಟಿ ಪ್ರೆಸ್ ಹತ್ತಿರ, ಅಜೀಜುದ್ದೀನ್ ರೋಡ್, ಮಂಗಳೂರು-575 001.
2. ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ಬ್ರಾಂಚ್ ನಂ.1, ರಸಿಕ ಚೇಂಬರ್ಸ್, ಸೆಂಟ್ರಲ್ ಮಾರ್ಕೆಟ್ ಎದುರು, ಹಂಪನಕಟ್ಟೆ, ಮಂಗಳೂರು.

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ:ಶ್ರೀ ಹರಿಣಾಕ್ಷಿ ಎಂ. ಇವರು ತಮ್ಮ ಗಂಡನಾದ ಶ್ರೀ ದುಗ್ಗಪ್ಪ ಸಪಾಲ್ಯ ಇವರು 1ನೇ ಪ್ರತಿವಾದಿಗಳಾದ ಶ್ರೀ ಮುಕೇಶ್ ಕುಮಾರ್ ದಾಸ್ ಇವರ ಲಾರಿಯಲ್ಲಿ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾರೆ, ದಿನಾಂಕ 26.2.1997 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದಗೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

ಪಿ.ಆರ್. 528 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪವಿಭಾಗ ದ.ಕ. ಜಿಲ್ಲೆ, ಮಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ.ಜಿಲ್ಲೆ, ಬೆಂದೂರ್‌ವೆಲ್ ವೃತ್ತ, ಮಂಗಳೂರು-2, ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಡಬ್ಲ್ಯೂಸಿಎ:ಸಿಆರ್-4/05 R ದಿನಾಂಕ: 22ನೇ ಮಾರ್ಚ್ 2005**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಶ್ರೀಮತಿ ಖತೀಜಮ್ಮ ದಿ ಮಹಮ್ಮದ್ ಕುಂಞಯವರ ಪತ್ನಿ
2. ಉಮ್ಮರ್‌ಫರೂತ್, ದಿ ಮಹಮದ್ ಕುಞಯವರ ಮಗ
3. ಆರ್ ನಸೀಮಾ, ದಿ ಮಹಮ್ಮದ್ ಕುಂಞರವರ ಮಗಳು
4. ಅಬ್ದುಲ್ ಸಮಾದ್, ದಿ ಮಹಮದ್ ಕುಂಞಯವರ ಮಗ
5. ಇರ್‌ಫಾನ್ ದಿ ಮಹಮದ್ ಕುಂಞಯವರ ಮಗ
6. ಮಹಮ್ಮದ್ ಉಬೈದ್, ಬಿನ್ ದಿ ಮಹಮದ್ ಕುಂಞ
7. ಮಾಸ್ಟರ್ ಹಫೀಜ್, ಬಿನ್ ಮಹಮದ್ ಕುಂಞ
2ರಿಂದ 7ರವರೆಗಿನ ಅರ್ಜಿದಾರರುಗಳು ದಿ॥ ಮಹಮ್ಮದ್ ಕಂಞಯವರ ಮಕ್ಕಳು, ವಾಸ: ಕಲ್ಲಕಟ್ಟೆಂ ಬೋಳಿಯಾರ್ ರಾಂತಡ್ಕ ಮಂಗಳೂರು ತಾಲ್ಲೂಕು

1. ಶ್ರೀ ಟಿ. ಟಹಮಿದ್ ಬಿನ್ ಟಿ ಹಸನಬ್ಬ ಕೋಟೆಕಾನಿರಸ್ತೆ ಮಂಗಳೂರು.
2. ಮೆ: ನ್ಯೂ ಇಂಡಿಯಾ ಅಶುರೆನ್ಸ್ ಕಂ. ಲಿ., ನೆಲ್ಲಿಕ್ಯಾ ರಸ್ತೆ, ಮಂಗಳೂರು.

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ:ಶ್ರೀ ಖತೀಜಮ್ಮ ಇವರು ತಮ್ಮ ಗಂಡನಾದ ಶ್ರೀ ದಿ॥ ಮಹಮ್ಮದ ಕಂಞ ಇವರು 1ನೇ ಪ್ರತಿವಾದಿಗಳಾದ ಶ್ರೀ ಟಿ. ಹಮಿದ್ s/o ಹಸನಬ್ಬ ಮಂಗಳೂರು ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾರೆ, ದಿನಾಂಕ 14.5.03 ರಂದು ಅಪಘಾತಕ್ಕೀಡಾಗಿ

ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದಗೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ ದ.ಕ. ಜಿಲ್ಲೆ, ಮಂಗಳೂರು.

ಪಿ.ಆರ್. 529

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪವಿಭಾಗ-1, ದ.ಕ.ಜಿಲ್ಲೆ, ಬೆಂದೂರ್‌ವೆಲ್ ವೃತ್ತ, ಮಂಗಳೂರು-2, ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಡಬ್ಲ್ಯೂಸಿಎ:ಸಿಆರ್-10/05 F, ದಿನಾಂಕ: 23ನೇ ಮಾರ್ಚ್ 2005**

**ಅರ್ಜಿದಾರರು**

1. ಶ್ರೀಮತಿ ಅವ್ವಮ್ಮ ದಿ ಅಬ್ದುಲ್ ರಹಿಮಾನ್‌ರವರ ಪತ್ನಿ
2. ಕುಮಾರಿ ಶಕೀನ ದಿ ಅಬ್ದುಲ್ ರಹಿಮಾನ್‌ರವರ ಮಗಳು
3. ಸಿದ್ದಿಕ್ ದಿವಂಗತ ಅಬ್ದುಲ್ ರಹಿಮಾನ್‌ರವರ ಮಕ್ಕಳು
4. ಇಸ್ಮಾಯಿಲ್ ದಿವಂಗತ ಅಬ್ದುಲ್ ರಹಿಮಾನ್‌ರವರ ಮಕ್ಕಳು
5. ಫೈಜಲ್ ದಿವಂಗತ ಅಬ್ದುಲ್ ರಹಿಮಾನ್‌ರವರ ಮಕ್ಕಳು
6. ಶ್ರೀಮತಿ ನಬೀಸ W/o ದಿ|| ಅಬ್ದುಲ್ ರಹಿಮಾನ್
7. ನೌಷದ್ D/o ದಿ|| ಅಬ್ದುಲ್ ರಹಿಮಾನ್
   ವಿಳಾಸ: ದೇರ್ಲ ಕಟ್ಟೆ ಅಂಚೆ, ಪನ್ನೀರ್ ಕ್ರಾಸ್ ಲತೀಫ್ ಕಂಪೌಂಡ್, ಮಂಗಳೂರು.

**ವಿರುದ್ಧ ಪ್ರತಿವಾದಿಗಳು**

1. ಸದಾಶಿವಶೆಟ್ಟಿ ತಂದೆ ಕೊರಗ ಶೆಟ್ಟಿ ತಂದೆ ಕೊರಗ ಶೆಟ್ಟಿ ದೇಲಂತ ಬೆಟ್ಟು ಪೋಸ್ಟ್
2. ಕೋಟೆಕಾರು ಮಂಗಳೂರು ತಾಲ್ಲೂಕು
   ದಿ ಓರಿಯಂಟಲ್ ಇನ್ಶೂರೆನ್ಸ್ ಕಂ. ಲಿ.,
   ಸಿಟಿ ಬ್ರಾಂಚ್ ಕಲ್ಯಾಡಿ ಬಿಲ್ಡಿಂಗ್
   ಕೆ.ಎಸ್. ರಾವ್ ರಸ್ತೆ, ಮಂಗಳೂರು ತಾಲ್ಲೂಕು

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ ಅವ್ವಮ್ಮ ಹಾಗೂ ಶ್ರೀಮೈನ ಬೀಸಾ ಇವರು ತಮ್ಮ ಗಂಡನಾದ ಶ್ರೀ ಅಬ್ದುಲ್ ರಹಿಮಾನ್ ಇವರು 1ನೇ ಪ್ರತಿವಾದಿಗಳಾದ ಶ್ರೀ ಸದಾಶಿವ ಶೆಟ್ಟಿ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾರೆ, ದಿನಾಂಕ 28.6.04 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದಗೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ-1 ದ.ಕ. ಜಿಲ್ಲೆ, ಮಂಗಳೂರು.

ಪಿ.ಆರ್. 530

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪವಿಭಾಗ-1, ದ.ಕ.ಜಿಲ್ಲೆ, ಬೆಂದೂರ್‌ವೆಲ್ ವೃತ್ತ, ಮಂಗಳೂರು-2, ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಡಬ್ಲ್ಯೂಸಿಎ:ಸಿಆರ್-7/05 R, ದಿನಾಂಕ: 23ನೇ ಮಾರ್ಚ್ 2005**

**ಅರ್ಜಿದಾರರು**

1. ಶ್ರೀಮತಿ ಜುಬೈದಭಾನು @ ಜುಬೈದ W/o ದಿ|| ಅವಂ @ ಆದಂ ಸಾಹೇಬ್
2. ಕು|| ತಬಾಸಂ (3) ಕು|| ಶಬನಾ (4) ಕು|| ತಾಸ್ಲಿಂ (5) ಮಾ|| ಮಹಮ್ಮದ್ ಅಫ್ರಿದಿ 2ರಿಂದ 5ರ ವರೆಗಿನ ಅರ್ಜಿದಾರರು ದಿ|| ಆದಂ @ ಆದಂ ಸಾಹೇಬರ ಮ್ಯಾನರ ಮಕ್ಕಳು, ಬುರ್ನೆ ಹೌಸ್ ಮಾಲಾಡಿ ಗ್ರಾಮ ಮತ್ತು ಅಂಚೆ ಬೆಳ್ತಂಗಡಿ ತಾಲ್ಲೂಕು

**ವಿರುದ್ಧ ಪ್ರತಿವಾದಿಗಳು**

1. ಶ್ರೀ ಎಂ. ಉಮೇಶ್ ರಾವ್ ಮಂಜುನಾಥ್ ರೋಡ್ ಲೈನ್ಸ್ ಶಿಲಿಬೀಡು ಉಡುಪಿ
2. ದಿ ಓರಿಯೆಂಟಲ್ ಇನ್ಸ್ಯೂರೆನ್ಸ್ ಕಂ.ಲಿ., ಸಿಟಿ ಬ್ರಾಂಚ್ I.K.S. ರಾವ್ ರಸ್ತೆ, ಹಂಪನ ಕಟ್ಟೆ ಮಂಗಳೂರು

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ ಜುಬೈದ ಬಾನು @ ಜುಬೈದ ಇವರು ತಮ್ಮ ಗಂಡನಾದ ಶ್ರೀ ಆದಂ ಸಾಹೇಬ್ ಇವರು 1ನೇ ಪ್ರತಿವಾದಿಗಳಾದ ಶ್ರೀ ಎಂ. ಉಮೇಶ ರಾವ್ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾರೆ, ದಿನಾಂಕ 17.1.05 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದಗೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ

ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ-1 ದ.ಕ. ಜಿಲ್ಲೆ, ಮಂಗಳೂರು.

ಪಿ.ಆರ್. 531

**IN THE COURT OF COMMISSIONER FOR WORKMEN'S COMPENSATION, BIDAR**
**No: LOB/WCA/Cr-14/2005**

**APPLICANTS:** **V/S** **RESPONDENT**

Sahera Banu w/o Late Md. Siddiqui Age 25 Years Occ : House hold, R/o Shivapur Mohalla Tq Humnabad Dist Bidar 2 Others

1. Md. Hadi No.11.1.2003/A Aghatown Hyderabad
2. The Divisional Officer United India Insurance Co. Ltd., Marabtink Hyderabad.

**PROCLAMATION**

Smt Sahera Banu W/o Late Mohammed Siqqiqui R/o Shivapur Mohalla Tq Humnabad Dist Bidar have/has filed application in this court claiming compensation stating that Late: Mohammed Siddiqui was working as Driver under the Respondent No.I he met with an accident arising out of and during the course of employment as a result he died on:30.3.2003.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

P.R. 532 Commissioner for Workmen's Compensation, Bidar.

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ, ನ್ಯಾಯಾಲಯದಲ್ಲಿ, ಕೊಪ್ಪಳ**
**ಪ್ರಕರಣ ಸಂಖ್ಯೆ:ಕಾಅಕೊ:ಕಾನಪ:99:2005, ದಿನಾಂಕ: 26ನೇ ಮಾರ್ಚ್ 2005**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

Smt K. Lakshmi W/o Tulasidas aged about 32 years R/o Nimbagal House wife village Anathapur Dist New Residing at Opp APMC yard Gagavathi Koppal Dist

1. Sri Ameer Bagh. S @ Ammer S/o Shaikshali own of the lorry bearing Reg No. Ap 12/4500 R/o No 9-4-160, Driver colony wravakonda, Anathapur Dist
2. M/s Oriental Insurance Company Ltd., By its Divisional Manager Bellary.

**ಪ್ರಕಟಣೆ**

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಶ್ರೀ ತುಳಸಿದಾಸ್ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:28.01.2005 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಗಾಯ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಮೃತ ತುಳಸಿದಾಸ್ ರಾದ ಶ್ರೀ:ಶ್ರೀಮತಿ ಕೆ. ಲಕ್ಷ್ಮಿ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ ಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ:ಗಾಯ: ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

ಪಿ.ಆರ್. 533

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**
**ನಂ.ಕಾಪಕಾ:ಎಫ್:ಎಸ್ಆರ್-7/2005**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

ಶ್ರೀಮತಿ ಸತ್ಯಭಾಮ ಕೋಂ ಬಿ.ಬಿ. ಮಲ್ಲೇಶಪ್ಪ ಬಾಣಾವರ, ಅರಸೀಕೆರೆ ತಾ: ಹಾಸನ ಜಿಲ್ಲೆ.

1. ಶ್ರೀ ಬಿ.ಸಿ. ಮಹಾವೀರ್ ಬಿನ್ ಲೇಟ್ ವೀಂಜರಾಜು, ಮಹಾವೀರ ಟ್ರೇಡರ್ಸ್, ಸುಭಾಷ್ ನಗರ, ಆರ್.ಎಂ.ಸಿ. ಯಾರ್ಡ್, ಅರಸೀಕೆರೆ.
2. ಶ್ರೀಮತಿ ಸರಸ್ವತಿ ಕೋಂ ಮಹಾವೀರ ಬಿ.ಸಿ. ಮಹಾವೀರ ಟ್ರೇಡರ್ಸ್ ಸುಭಾಷ್ ನಗರ, ಆರ್.ಎಂ. ಯಾರ್ಡ್, ಅರಸೀಕೆರೆ.

**ಪ್ರಕಟಣೆ**

ಬಿ.ಬಿ. ಮಲ್ಲೇಶಪ್ಪ ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 8.8.2004 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರು ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಎಸ್. ರಾಮಕೃಷ್ಣ**

ಪಿ.ಆರ್. 534 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ**
**ಪ್ರಕರಣ ಸಂಖ್ಯೆ:ಕಾಪಕಾ:ಎಸ್‌ಆರ್-42/2005 ದಿನಾಂಕ 16ನೇ ಮಾರ್ಚ್ 2005**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

ಶ್ರೀಮತಿ ಶ್ಯಾಂತವ್ವಾ ಬೀಮಪ್ಪಾ ನಾಯಿಕ್, ವಾಸ ಬನಟನೂರು ತಾ-ಮುದೋಳ, ಜಿಲ್ಲೆ ಬಾಗಲಕೋಟೆ, (ಹಾಗೂ ಇತರೆ 3 ಜನರು)

1. ಸುಭಾಷ ಲಾಯಪ್ಪಾ ನಾಯ್ಕಿರ್ ವಾಸ ಅನವಾಲ ತಾ-ಬಾದಾಮಿ ಜಿಲ್ಲೆ ಬಾಗಲಕೋಟೆ
2. ದಿ ಡಿವಿಜಿನಲ್ ಮ್ಯಾನೇಜರ್ ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ಮೆಳ್ಳಿಗೇರಿ ಕಾಂಪ್ಲೆಕ್ಸ್ ಕಲಾದಗಿ, ರೋಡ್, ಬಾಗಲಕೋಟೆ

**ಪ್ರಕಟಣೆ**

ಶ್ರೀಮತಿ ಶ್ಯಾಂತವ್ವಾ ಬೀಮಪ್ಪಾ ನಾಯಿಕ್ (ಹಾಗೂ ಇತರೆ 3 ಜನರು) ಇವರುಗಳಾದ, ತಾವು ಮೃತ ಮಂಜುನಾಥ ಇವರ ತಾಯಿ ಮತ್ತು ಅಕ್ಕ, ತಮ್ಮಿಂದರು ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮಂಜುನಾಥ ಬೀಮಪ್ಪಾ ನಾಯಿಕ್ ಇವರು ಒಂದನೇ ಪ್ರತಿವಾದಿಗಳಾದ ಸುಭಾಷ್ ಲಾಯಪ್ಪಾ ನಾಯ್ಕಿರ್ ವಾಸ-ಅನವಾಲ ತಾ-ಬಾದಾಮಿ ಜಿಲ್ಲೆ:ಬಾಗಲಕೋಟೆ ಇವರ ಅಪಘಾತದಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ.

ಈ ಸಂಬಂಧವಾಗಿ ಈ ಪ್ರಕಟಣೆ ಮೂಲಕ ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತನ ಆಶ್ರಿತ ಅವಲಂಭಿತ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಸಲ್ಲಿಸತಕ್ಕದ್ದು, ತಪ್ಪಿದಲ್ಲಿ ಮೇಲ್ಕಂಡ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿಗಳು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಪಿ.ಆರ್. 535 ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ**
**ಪ್ರಕರಣ ಸಂಖ್ಯೆ:ಕಾಪಕಾ:ಎಸ್‌ಆರ್-30/2005 ದಿನಾಂಕ 14ನೇ ಮಾರ್ಚ್ 2005**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

ನೀಲಪ್ಪಾ ಮಲ್ಲಪ್ಪಾ ಹಳ್ಳಿಕೇರಿ, ವಾಸ-ಹಿರೇ ಮುಚ್ಚಲಗುಡ್ಡ, ತಾ-ಬಾದಾಮಿ ಜಿಲ್ಲೆ ಬಾಗಲಕೋಟೆ (ಹಾಗೂ ಇತರೆ ಇಬ್ಬರು)

1. ಮಂಜುನಾಥ ವಾಸ-ಸ್ಟ್ರೀಟ್ ನಂ.129, ಸೌಪರನಿಕಾ ಕಾವೇರಿ ಕ್ಲಿನಿಕ ಹತ್ತಿರ, ಕುಲವಾ, ಮಂಗಳೂರು.
2. ಬಸ್ಕರ ಅಮೇನ ನಾರಾಯಣ ಪಿ.ಅಮೇನ ಹೊಟೇಲ ಸತ್ಕಾರ, ಬೈಕಮಪಡಿಪೇಟೆ, ಬೈಕಮಪಡಿ, ಮಂಗಳೂರು.

**ಪ್ರಕಟಣೆ**

ಶ್ರೀ ನೀಲಪ್ಪಾ, ಮಲ್ಲಪ್ಪಾ ಹಳ್ಳಿಕೇರಿ, ಹಿರೇಮುಚ್ಚಲಗುಡ್ಡ, ತಾ-ಬಾದಾಮಿ ಜಿಲ್ಲೆ: ಬಾಗಲಕೋಟೆ, (ಹಾಗೂ ಇತರೆ ಇಬ್ಬರು) ಇವರುಗಳಾದ, ತಾವು ಮೃತ ಮೈಲಾರಪ್ಪ ಇವರ ತಂದೆ ಮತ್ತು ತಾಯಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮೈಲಾರೆಪ್ಪಾ ಹಳ್ಳಿಕೇರಿ ಇವರು ಒಂದನೇ ಪ್ರತಿವಾದಿಗಳಾದ ಮಂಜುನಾಥ ವಾಸ-ಸ್ಟ್ರೀಟ್ ನಂ.129, ಸೌಪರಿನಿಕಾ, ಕಾವೇರಿ ಕ್ಲಿನಿಕ ಹತ್ತಿರ, ಕುಲವಾ, ಮಂಗಳೂರು ಇವರ ಬಾವಿಯ ಕೆಲಸದಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ.

ಈ ಸಂಬಂಧವಾಗಿ ಈ ಪ್ರಕಟಣೆ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತನ ಆಶ್ರಿತ ಅವಲಂಭಿತ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಸಲ್ಲಿಸತಕ್ಕದ್ದು, ತಪ್ಪಿದಲ್ಲಿ ಮೇಲ್ಕಂಡ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿಗಳು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಪಿ.ಆರ್. 536 ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ**
**ಪ್ರಕರಣ ಸಂಖ್ಯೆ:ಕಾಪಕಾ:ಎಸ್‌ಆರ್-36/2005 ದಿನಾಂಕ 15ನೇ ಮಾರ್ಚ್ 2005**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

ಶ್ರೀಮತಿ ಬಸಮ್ಮಾ ಕರಿವೀರಪ್ಪಾ ಕುಂಬಾರ
ವಾಸ-ಲವಲಾಸಾರಾ, ಇಳಕಲ ತಾ- ಹುಣಗುಂದ
ಜಿಲ್ಲೆ: ಬಾಗಲಕೋಟೆ (ಹಾಗೂ ಇತರೆ 7 ಜನರು)

1. ಬಸವರಾಜ ಲಿಂಗನಗೌಡಾ ಲಿಂಗಾಯತ್ ವಾಸ-ಜಂಗಮರಹಳ್ಳಿ ತಾ-ಮಾನವಿ, ಜಿಲ್ಲೆ, ರಾಯಚೂರು
2. ದಿ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂ.ಲಿ., ಕುಷ್ಟಗಿ ರೋಡ್, ಬಸ್ ಸ್ಟ್ಯಾಂಡ್ ಹತ್ತಿರ, ಸಿಂದನೂರು.

**ಪ್ರಕಟಣೆ**

ಶ್ರೀಮತಿ ಬಸಮ್ಮಾ ಕರವೀರಪ್ಪಾ ಕುಂಬರ (ಹಾಗೂ ಇತರೆ 7 ಜನರು) ಇವರುಗಳಾದ, ತಾವು ಮೃತ ಲಿಂಗಪ್ಪಾ ಇವರ ತಂದೆ ಮತ್ತು ತಾಯಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಲಿಂಗಪ್ಪಾ ಇವರು ಒಂದನೇ ಪ್ರತಿವಾದಿಗಳಾದ ಬಸವರಾಜ ಲಿಂಗನಗೌಡಾ ಲಿಂಗಾಯತ್ ವಾಸ- ಜಂಗಮರ ಹಳ್ಳಿ ತಾ- ಮಾನವಿ ಜಿಲ್ಲೆ, ರಾಯಚೂರು ಇವರ ಟ್ರ್ಯಾಕ್ಟರದಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ.

ಈ ಸಂಬಂಧವಾಗಿ ಈ ಪ್ರಕಟಣೆ ಮೂಲಕ ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತನ ಆಶ್ರಿತ ಅವಲಂಭಿತ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಸಲ್ಲಿಸತಕ್ಕದ್ದು, ತಪ್ಪಿದಲ್ಲಿ ಮೇಲ್ಕಂಡ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿಗಳು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಪಿ.ಆರ್. 537 ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ**
**ಪ್ರಕರಣ ಸಂಖ್ಯೆ:ಕಾಪಕಾ:ಎಸ್‌ಆರ್-39/2005 ದಿನಾಂಕ 16ನೇ ಮಾರ್ಚ್ 2005**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

ಲಕ್ಷ್ಮೀಬಾಯಿ ಚೆನ್ನಪ್ಪಾ ಹಣಮಸಾಗರ
ವಾಸ-ಸೂಳಿಭಾವಿ ತಾ-ಹುಣಗುಂದ ಜಿಲ್ಲೆ
ಬಾಗಲಕೋಟೆ (ಹಾಗೂ ಇತರೆ ಇಬ್ಬರು)

1. ಶ್ರೀ ಎ.ಎಂ. ನವಲೂರು, ಕೇರಾಫ್ ಹೆಚ್.ಐ. ಪಟೇಲ, ಅಮೀನಗಡ ತಾ- ಹುಣಗುಂದ ಜಿಲ್ಲೆ, ಬಾಗಲಕೋಟೆ.
2. ದಿ ಬ್ರ್ಯಾಂಚ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂ.ಲಿ., ಮೆಳ್ಳಿಗೇರಿ ಕಾಂಪ್ಲೆಕ್ಸ್ ಕಲಾದಗಿ ರೋಡ್, ಬಾಗಲಕೋಟೆ.

**ಪ್ರಕಟಣೆ**

ಶ್ರೀಮತಿ ಲಕ್ಷ್ಮೀಬಾಯಿ ಚೆನ್ನಪ್ಪಾ ಹಣಮಸಾಗರ ಹಾಗೂ ಇತರೆ ಇಬ್ಬರು ಇವರುಗಳಾದ, ತಾವು ಮೃತ ಚೆನ್ನಪ್ಪಾ ಇವರ ಹೆಂಡತಿ ಮತ್ತು ಮಕ್ಕಳು ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಚೆನ್ನಪ್ಪಾ ವಿಠಪ್ಪಾ ಹಣಮಸಾಗರ ಇವರು ಒಂದನೇ ಪ್ರತಿವಾದಿಗಳಾದ ಶ್ರೀ ಎ.ಎಂ. ನವಲೂರು, ವಾಸ-ಹೆಚ್.ಐ. ಪಟೇಲ, ಅಮಿನಗಡ ತಾ-ಹುಣಗುಂದ ಇವರ ಅಪಘಾತದಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ.

ಈ ಸಂಬಂಧವಾಗಿ ಈ ಪ್ರಕಟಣೆ ಮೂಲಕ ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತನ ಆಶ್ರಿತ ಅವಲಂಭಿತ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಸಲ್ಲಿಸತಕ್ಕದ್ದು, ತಪ್ಪಿದಲ್ಲಿ ಮೇಲ್ಕಂಡ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿಗಳು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಪಿ.ಆರ್. 538 ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ**
**ಪ್ರಕರಣ ಸಂಖ್ಯೆ:ಕಾಪಕಾ:ಎಸ್‌ಆರ್-40/2005 ದಿನಾಂಕ 16ನೇ ಮಾರ್ಚ್ 2005**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

ಶ್ರೀಮತಿ ಹಣಮವ್ವಾ ಈರಪ್ಪಾ ಗಂಟಿ
ವಾಸ-ಸೂಳಿಭಾವಿ ತಾ- ಹುಣಗುಂದ ಜಿಲ್ಲೆ
ಬಾಗಲಕೋಟೆ (ಹಾಗೂ ಇತರೆ 3 ಜನರು)

1. ಶ್ರೀ ಎ.ಎಂ. ನವಲೂರು, ವಾಸ- ಹೆಚ್.ಐ. ಪಟೇಲ, ವಾಸ- ಅಮೀನಗಡ ತಾ- ಹುಣಗುಂದ ಜಿಲ್ಲೆ, ಬಾಗಲಕೋಟೆ.
2. ದಿ ಬ್ರ್ಯಾಂಚ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂ. ಲಿ., ಮೆಳ್ಳಿಗೇರಿ ಕಾಂಪ್ಲೆಕ್ಸ್, ಕಲಾದಗಿ ರೋಡ್, ಬಾಗಲಕೋಟೆ.

**ಪ್ರಕಟಣೆ**

ಶ್ರೀಮತಿ ಹಣಮವ್ವಾ ಈರಪ್ಪಾ ಗಂಟಿ (ಹಾಗೂ ಇತರೆ 3 ಜನರು) ಇವರುಗಳಾದ, ತಾವು ಮೃತ ಈರಪ್ಪಾ ಇವರ ಹೆಂಡತಿ ಮತ್ತು ಮಕ್ಕಳು ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಈರಪ್ಪಾ ಶೀಮಪ್ಪಾ ಗಂಟಿ ಇವರು ಒಂದನೇ

ಪ್ರತಿವಾದಿಗಳಾದ ಶ್ರೀ ಎ.ಎಂ. ನವಲೂರು, ವಾಸ ಹೆಚ್-ಐ. ಪಟೇಲ, ಅಮೀನಗಡ ತಾ- ಹುಣಗುಂದ ಇವರ ಟ್ರಕ್ಕ ದಲ್ಲಿ ಡ್ರೈವರ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ.

ಈ ಸಂಬಂಧವಾಗಿ ಈ ಪ್ರಕಟಣೆ ಮೂಲಕ ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತನ ಆಶ್ರಿತ ಅವಲಂಭಿತ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಸಲ್ಲಿಸತಕ್ಕದ್ದು, ತಪ್ಪಿದಲ್ಲಿ ಮೇಲ್ಕಂಡ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿಗಳು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ.

ಪಿ.ಆರ್. 539

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ**
**ಪ್ರಕರಣ ಸಂಖ್ಯೆ:ಕಾಪಕಾ:ಎಸ್ಆರ್-43/2005 ದಿನಾಂಕ 18ನೇ ಮಾರ್ಚ್ 2005**

**ಅರ್ಜಿದಾರರು**
ಸಂಗಪ್ಪಾ ರಾಮಪ್ಪಾ ಪರಕಾಳೆ
ವಾಸ-ಕೋಲಾರ ತಾ-ಬಸವನ ಬಾಗೇವಾಡಿ,
(ಹಾಗೂ ಇತರೆ ಒಬ್ಬರು)

**ವಿರುದ್ಧ**

**ಪ್ರತಿವಾದಿಗಳು**
1. ಶಿವಯ್ಯಾ ಐ. ಮಠಪತಿ ವಾಸ-ಕೋಲಾರ ತಾ-ಬಸವನ ಬಾಗೇವಾಡಿ, ಜಿಲ್ಲೆ, ಬಿಜಾಪುರ
2. ದಿ ಬ್ರ್ಯಾಂಚ್ ಮ್ಯಾನೇಜರ್, ಯುನೈಟೆಡ್ ಇನ್ಸೂರೆನ್ಸ್ ಕಂ.ಲಿ., ಬಾಗಲಕೋಟೆ.

**ಪ್ರಕಟಣೆ**

ಶ್ರೀ ಸಂಗಪ್ಪಾ ರಾಮಪ್ಪಾ ಪರಕಾಳೆ ಹಾಗೂ ಇತರೆ ಒಬ್ಬರು ಇವರುಗಳಾದ, ತಾವು ಮೃತ ರಮೇಶ ಇವರ ತಂದೆ ಮತ್ತು ತಾಯಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ರಮೇಶ ಸಂಗಪ್ಪಾ ಮಕಾಳೆ ಇವರು ಒಂದನೇ ಪ್ರತಿವಾದಿಗಳಾದ ಶಿವಯ್ಯಾ ಐ. ಮಠಪರತಿ ಇವರ ಅಪಘಾತದಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ.

ಈ ಸಂಬಂಧವಾಗಿ ಈ ಪ್ರಕಟಣೆ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತನ ಆಶ್ರಿತ ಅವಲಂಭಿತ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಸಲ್ಲಿಸತಕ್ಕದ್ದು, ತಪ್ಪಿದಲ್ಲಿ ಮೇಲ್ಕಂಡ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿಗಳು ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ.

ಪಿ.ಆರ್. 540

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**
**ಸಂ.ಕಾಪಕಾ:ಎಫ್:ಎಸ್ಆರ್-8/2005**

**ಅರ್ಜಿದಾರರು**
1. ಶ್ರೀಮತಿ ಮಲ್ಲಿಗೆ ಕೋಂ ಆರ್. ನಾಗರಾಜ್, 19 ವರ್ಷ
2. ಶ್ರೀಮತಿ ಗೌರಮ್ಮ ಕೋಂ ಕೆ. ರಂಗಯ್ಯ, 49 ವರ್ಷ
3. ಶ್ರೀ ಕೆ. ರಂಗಯ್ಯ ಬಿನ್ ಕೆಂಚಯ್ಯ, 52 ವರ್ಷ
ವಾಸ: ತೇಜೂರು ವಿಲೇಜ್ ಮತ್ತು ಅಂಚೆ, ಸಾಲಗಾಮೆ ಹೋಬಳಿ, ಹಾಸನ ತಾ:

**ವಿರುದ್ಧ**

**ಪ್ರತಿವಾದಿಗಳು**
1. ಶ್ರೀಮತಿ ವಿಜಯಲಕ್ಷ್ಮಿ ಕೋಂ ಕೆ. ಲಕ್ಷ್ಮಿನಾರಾಯಣ್ ರಾವ್ ಇಂಜಿನಿಯರಿಂಗ್ ಕಾಲೇಜು ಎದುರು, ಸಾಲಗಾಮೆ ರೋಡ್, ಹಾಸನ.
2. ಶ್ರೀ ಕೆ. ಲಕ್ಷ್ಮಿನಾರಾಯಣ್‌ರಾವ್, ಇಂಜಿನಿಯರಿಂಗ್ ಕಾಲೇಜು ಎದುರು, ಸಾಲಗಾಮೆ ರೋಡ್, ಹಾಸನ.
3. ದಿ ಸೀನಿಯರ್ ಡಿವಿಜನಲ್ ಮ್ಯಾನೇಜರ್, ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ.ಲಿ., ಎಸ್. ಬಿಲ್ಡಿಂಗ್, ಬಿ.ಎಂ. ರೋಡ್, ಹಾಸನ.

**ಪ್ರಕಟಣೆ**

ನಾಗರಾಜು ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 22:23.9.2004 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರು ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಎನ್. ರಾಮಕೃಷ್ಣ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಹಾಸನ ಜಿಲ್ಲೆ, ಹಾಸನ.

ಪಿ.ಆರ್. 541

**ಜಿಲ್ಲಾ ಖಜಾನೆ ಅಧಿಕಾರಿಗಳ ಕಾರ್ಯಾಲಯ, ಗದಗ**

**ಪ್ರಕಟಣೆ ಸಂ:ಜಿಖಗ:ಸಿಬ್ಬಂದಿ:119:2004-2005, ದಿನಾಂಕ: 21ನೇ ಮಾರ್ಚ್ 2005**

**ವಿಷಯ:** ಶಿರಹಟ್ಟಿ ಉಪಖಜಾನೆಯಲ್ಲಿ ಧನಾದೇಶ ಪದ್ಧತಿ ಜಾರಿಗೆ ತರುವ ಕುರಿತು.

**ಉಲ್ಲೇಖ:** 1. ಸರ್ಕಾರಿ ಆದೇಶ ಸಂ:ಆಇ92:ಆಖಇ:2002:ದಿನಾಂಕ:17.2.2005.

2. ಖಜಾನೆ ನಿರ್ದೇಶಕರ ಪತ್ರ:ಸಂ:ಖನಿ:ಪ್ರಕ್ರಿಯೆ:5:04-05:ದಿ:17.02.05.

ಉಲ್ಲೇಖ (1)ರಲ್ಲಿ ನಮೂದಿಸಿದ ಸರ್ಕಾರಿ ಆದೇಶದಲ್ಲಿ ಗದಗ ಜಿಲ್ಲಾ ಖಜಾನೆ ವ್ಯಾಪ್ತಿಯ ಶಿರಹಟ್ಟಿ ಬ್ಯಾಂಕೇತರ ಉಪಖಜಾನೆಯನ್ನು ಬ್ಯಾಂಕಿಂಗ್ ಉಪಖಜಾನೆಯನ್ನಾಗಿ ಪರಿವರ್ತಿಸಿ ಧನಾದೇಶ ಪಪದ್ಧತಿಯನ್ನು ಜಾರಿಗೆ ತರುವಂತೆ ಆದೇಶ ನೀಡಿದೆ.

ಉಲ್ಲೇಖ (2)ರಲ್ಲಿ ನಮೂದಿಸಿದ ಮಾನ್ಯ ಖಜಾನೆ ನಿರ್ದೇಶಕರ ಪತ್ರದಲ್ಲಿ ದಿನಾಂಕ:1.4.2005 ರಿಂದ ಜಾರಿಗೆ ಬರುವಂತೆ ಶಿರಹಟ್ಟಿ ಉಪಖಜಾನೆಯ ನಗದು ವಹಿವಾಟನ್ನು ಸ್ಥಳೀಯ ಭಾರತೀಯ ಸ್ಟೇಟ್ ಬ್ಯಾಂಕಿಗೆ (ADB) ವರ್ಗಾಯಿಸಿ ಧನಾದೇಶ ಪದ್ಧತಿಯನ್ನು ಜಾರಿಗೆ ತರಲು ಕ್ರಮತೆಗೆದುಕೊಳ್ಳುವಂತೆ ನಿರ್ದೇಶನ ನೀಡಿದ್ದಾರೆ.

ಅದರಂತೆ ದಿನಾಂಕ:1.4.2005ರಿಂದ ಶಿರಹಟ್ಟಿ ಉಪಖಜಾನೆಯು ಬ್ಯಾಂಕಿಂಗ್ ಉಪಖಜಾನೆಯಾಗಿ ಪರಿವರ್ತನೆಗೊಂಡು ಧನಾದೇಶ ಪದ್ಧತಿಯೊಂದಿಗೆ ಕಾರ್ಯನಿರ್ವಹಿಸುತ್ತದೆ ಎಂದು ಪ್ರಕಟಿಸುತ್ತ ಈಗ ನಿರ್ವಹಿಸುತ್ತಿರುವ ಎಲ್ಲ ತರಹದ ನಗದು ವಹಿವಾಟನ್ನು ಸ್ಥಳೀಯ ಭಾರತೀಯ ಸ್ಟೇಟ್ ಬ್ಯಾಂಕ್ (ADB) ಮುಖಾಂತರ ನಿರ್ವಹಿಸಲಾಗುತ್ತದೆಂದು ಪ್ರಕಟಿಸಿದೆ.

ಈ ಹೊಸ ಪದ್ಧತಿಯಲ್ಲಿ ಎಲ್ಲ ಹಣ ಸೆಳೆಯುವ ಇಲಾಖಾ ಅಧಿಕಾರಿಗಳು, ಪಿಂಚಣಿದಾರರು ಖಜಾನೆಗೆ ನಗದೀಕರಣಕ್ಕಾಗಿ ಸಲ್ಲಿಸುವ ಬಿಲ್ಲುಗಳಿಗೆ ಭಾರತೀಯ ಸ್ಟೇಟ್ ಬ್ಯಾಂಕ್ ಶಿರಹಟ್ಟಿ (ADB) ಶಾಖೆಯಲ್ಲಿ ನಗದೀಕರಣಗೊಳ್ಳುವಂತೆ ಧನಾದೇಶ ನೀಡಲಾಗುವುದು. ಅದರಂತೆ ಸರ್ಕಾರಕ್ಕೆ ಜಮಾ ಮಾಡಬೇಕಾದ ಹಣವನ್ನು ನಿಗದಿತ ಚಲನ್ ಫಾರ್ಮ್‌ಗಳಲ್ಲಿ ಭರ್ತಿ ಮಾಡಿ 12 ಅಂಕಿಯ ಲೆಕ್ಕ ಶೀರ್ಷಿಕೆಗಳೊಂದಿಗೆ ಸಂಬಂಧಪಟ್ಟ ಅಧಿಕಾರಿಗಳ ಮೇಲುರುಜುವಿನೊಂದಿಗೆ ಸ್ಥಳೀಯ ಭಾರತೀಯ ಸ್ಟೇಟ್ ಬ್ಯಾಂಕಿನಲ್ಲಿ (ADB) ಜಮಾ ಮಾಡುವಂತೆ ಪ್ರಕಟಿಸಿದೆ.

ಈ ವಿಷಯದಲ್ಲಿ ಯಾವುದೇ ತೊಂದರೆಗಳಿದ್ದಲ್ಲಿ ಪತ್ರಾಂಕಿತ ಉಪಖಜಾನೆ ಅಧಿಕಾರಿಗಳು ಶಿರಹಟ್ಟಿ ಇವರನ್ನು ಖುದ್ದಾಗಿ ಅಥವಾ ದೂರವಾಣಿ ಸಂಖ್ಯೆ: 262213 ಮುಖಾಂತರ ಸಂಪರ್ಕಿಸಬಹುದು.

ಪಿ.ಆರ್. 542 ಜಿಲ್ಲಾ ಖಜಾನೆ ಅಧಿಕಾರಿಗಳು, ಗದಗ.

**ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧೀಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯ**

| **ಫಿರ್ಯಾದುದಾರರು** | **ಪ್ರತಿವಾದಿಗಳು** |
|---|---|
| ಅಬಕಾರಿ ಉಪ ನಿರೀಕ್ಷಕರು, | ರಾಮ್ ಕುಮಾರ್ ಬಿನ್ ಲೇಟ್ ದಾಸಪ್ಪ |
| ನಂ.1 ಗುಪ್ತ ವಾರ್ತಾವಿಭಾಗ, ಮೈಸೂರು. | 5ನೇ ಕ್ರಾಸ್, ಮನೆ ನಂ.1948, ಸುಭಾಷ್ ನಗರ, ಮಂಡ್ಯ ಸಿಟಿ. |

**ಪ್ರಕರಣದ ಮುಖ್ಯಾಂಶಗಳು:-**

ದಿನಾಂಕ:4.12.2004 ರಂದು ಬೆಳಿಗ್ಗೆ 8-00 ಗಂಟೆಯಲ್ಲಿ ಅಬಕಾರಿ ನಿರೀಕ್ಷಕರು, ನಂ. 1. ಗುಪ್ತ ವಾರ್ತಾ ವಿಭಾಗ, ಮೈಸೂರು - ಇವರು ಮಂಡ್ಯ ಸಿಟಿ ಮೈಸೂರು - ಬೆಂಗಳೂರು ಮುಖ್ಯ ರಸ್ತೆಯ ಅಗ್ನಿಶಾಮಕ ಠಾಣೆಯ ಹತ್ತಿರ, ವಾಹನ ಬಜಾಜ್ ಚೇತಕ್ ಸ್ಕೂಟರ್ ಕೆಎ-02/ಆರ್-8465 ರಲ್ಲಿ ಅಕ್ರಮವಾಗಿ 6 ಕೆ.ಜಿ.ಯಷ್ಟು ಅಕ್ರಮ ಮದ್ಯ ತಯಾರಿಕೆಗಾಗಿ ಉಪಯೋಗಿಸುವ ವಿವಿಧ ನಮೂನೆಯ ಕಾರ್ಕಗಳನ್ನ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆಹಚ್ಚಿ ವಾಹನ ಮತ್ತು ಕಾರ್ಕಗಳನ್ನು ಜಪ್ತಿ ಮಾಡಿ ಪ್ರಕರಣ ಸಂಖ್ಯೆ: 18/2004-05ರ ಮೂಲಕ ಪ್ರಕರಣವನ್ನು ದಾಖಲುಪಡಿಸಿ ಮುಂದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಈ ಪ್ರಾಧಿಕಾರವು ಪ್ರಕರಣದ ಆರೋಪಿಗೆ ದಿನಾಂಕ: 10.1.2005 ರಂದು ಕಾರಣ ಕೇಳಿ ನೋಟೀಸು ನೀಡಲಾಗಿದ್ದು ಸದರಿ ನೋಟೀಸು ಜಾರಿಯಾಗದೇ ಹಿಂದಕ್ಕೆ ಬಂದಿರುತ್ತದೆ.

ಈ ಪ್ರಕರಣವು ದಾಖಲಾಗಿ (3) ತಿಂಗಳು ಕಳೆದಿದ್ದರೂ ಈವರೆಗೆ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನ ತನ್ನದೆಂದು ಕೋರಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲಿಸಿದ (1) ತಿಂಗಳೊಳಗಾಗಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅರ್ಜಿಸಲ್ಲಿಸಿ ಸದರಿ ಸ್ವತ್ತು ತನ್ನದೆಂದೂ ಅದು ಕಾನೂನು ಬದ್ಧವಾಗಿದೆ ಎಂದ ಸಾಕ್ಷ್ಯಾಧಾರಗಳೊಂದಿಗೆ ಹಾಜರಾಗದೇ ಇದ್ದಲ್ಲಿ ಸದರಿ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ವಸ್ತುಗಳಾಗಿದ್ದಲ್ಲಿ ಅಂತಹಾ ವಸ್ತುಗಳನ್ನು ಹಾಗೂ ಅಕ್ರಮ ಸಾಗಣೆಗೆ ಬಳಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಈ ಪ್ರಕರಣದಲ್ಲಿ ವಾಹನವನ್ನು ವಶಪಡಿಸಿಕೊಂಡು (3) ತಿಂಗಳು ಕಳೆದಿದ್ದರೂ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನವು ತನ್ನದೆಂದು ಕೋರಿ ಹಕ್ಕು ಚಲಾಯಿಸದೇ ಇರುವುದನ್ನು ಗಮನಿಸಿದಾಗ ವಾಹನ ಚಾಲಕನು ತನ್ನ ತಿಳುವಳಿಕೆಯಿಂದಲೇ ಈ ಅಕ್ರಮವನ್ನು ಎಸೆಗಿರುವುದು ದೃಢಪಟ್ಟಿರುತ್ತದೆ. ಹಾಗೂ ದಿನಾಂಕ: 4.12.2004 ರಂದು ಅಬಕಾರಿ ಉಪ ನಿರೀಕ್ಷಕರು, ನಂ.1, ಗುಪ್ತವಾರ್ತಾ ದಳ, ಮೈಸೂರು ಇವರು ಅಕ್ರಮವಾಗಿ ನಕಲಿ ಮದ್ಯ ತಯಾರಿಕೆಗೆ ಬಳಸಲಾಗುವ ಬಾಟ್ಲಿ ಕಾರ್ಕ್‌ಗಳನ್ನು ಸ್ಥಳ ಮಹಜರಿನ ಮೂಲಕ ಜಪ್ತಿಪಡಿಸಿದ್ದು, ಈ ಅಕ್ರಮ ನಕಲಿ ಮದ್ಯ ತಯಾರಿಕೆಗೆ ಸಹಕಾರಿಯಾಗಿರುವ ಆರೋಪವು ಸಾಬೀತಾಗಿರುತ್ತದೆ. ಈ ಕಾರಣಗಳಿಂದ ದಿನಾಂಕ: 4.12.2004 ರಂದು ಜಪ್ತಿಪಡಿಸಲಾಗಿರುವ ವಾಹನ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ:ಕೆಎ-02/ಆರ್-8465ನ್ನು ಹಾಗೂ ಅಕ್ರಮ ಕಾರ್ಕ್‌ಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಎ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/90/04-05, ದಿನಾಂಕ: 25ನೇ ಫೆಬ್ರವರಿ 2005**

ಮೇಲ್ಕಂಡ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಗೋವಿಂದಪ್ಪ, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಬಿ)ರ ಅಡಿಯಲ್ಲಿ ಅನುಸರಿಸಬೇಕಾದ ವಿಧಿವಿಧಾನಗಳನ್ನು ಅನುಸರಿಸಿ ಅಬಕಾರಿ ನಿರೀಕ್ಷಕರು, ನಂ.1, ಗುಪ್ತ ವಾರ್ತಾ ವಿಭಾಗ, ಮೈಸೂರುರವರ ಪ್ರ.ಮಾ.ವ. ಸಂಖ್ಯೆ: 18/2004-05, ದಿನಾಂಕ: 4.12.2004 ರಲ್ಲಿ ವಶಪಡಿಸಿಕೊಂಡ ವಾಹನ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ-02/ಆರ್-8465ನ್ನು ಮತ್ತು 6 ಕೆ.ಜಿ. ವಿವಿಧ ನಮೂನೆಯ ಕಾರ್ಕ್‌ಗಳನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ನಕಲಿ ಮದ್ಯ ತಯಾರಿಕೆಗೆ ಬಳಸಲಾಗುರ ಕಾರ್ಕ್‌ಗಳನ್ನು ನಾಶಪಡಿಸಲು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 25.2.2005 ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು,
ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್. 543

**ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧೀಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯ**

**ಫಿರ್ಯಾದುದಾರರು**

ಅಬಕಾರಿ ನಿರೀಕ್ಷಕರು,
ಮಂಡ್ಯ ವಲಯ

**ಪ್ರತಿವಾದಿಗಳು**

1. ಹೆಚ್.ಸಿ. ಯೋಗೇಶ್ ಬಿನ್ ಚಿಕ್ಕಬೋರಯ್ಯ,
ದೇವಸ್ಥಾನದ ಹಿಂಭಾಗ, ಹನಕೆರೆ ಗ್ರಾಮ, ಮಂಡ್ಯ ತಾಲ್ಲೂಕು.
2. ಹೆಚ್.ಎಸ್. ಸಂತೋಷ್ ಬಿನ್ ಶಿವಣ್ಣ
ಬೋರೇದೇವರ ದೇವಸ್ಥಾನದ ಹಿಂಭಾಗ, ಹನಕೆರೆ ಗ್ರಾಮ,
ಮಂಡ್ಯ ತಾಲ್ಲೂಕು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:10.9.2004 ರಂದು ಸಾಯಂಕಾಲ 6-00 ಗಂಟೆಯಲ್ಲಿ ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ ಇವರು ಮಂಡ್ಯ ತಾಲ್ಲೂಕು ಮೈಸೂರು - ಬೆಂಗಳೂರು ಮುಖ್ಯ ರಸ್ತೆಯ ಮಲ್ಲಯ್ಯನದೊಡ್ಡಿ ಗ್ರಾಮದ ಬಸ್ ನಿಲ್ದಾಣದ ಹತ್ತಿರ ವಾಹನ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ-02/ಯು-563ರಲ್ಲಿ ಅಕ್ರಮವಾಗಿ 21.600 ಲೀ. ನಕಲಿ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆಹಚ್ಚಿ ವಾಹನ ಮತ್ತು ನಕಲಿ ಮದ್ಯವನ್ನು ಜಪ್ತಿ ಮಾಡಿ ಪ್ರಕರಣ ಸಂಖ್ಯೆ: 4/2004-05ರ ಮೂಲಕ ಪ್ರಕರಣವನ್ನು ದಾಖಲುಪಡಿಸಿರುತ್ತಾರೆ. ಕರ್ನಾಟಕ ಅಬಕಾರಿ ಕಾಯಿದೆ ಕಲಂ 14 ಮತ್ತು 34ರ ರೀತ್ಯಾ ಕ್ರಮ ಜರುಗಿಸಿರುತ್ತಾರೆ.

ತದನಂತರ ಪ್ರಕರಣದ ತನಿಖೆಯನ್ನು ಆರಂಭಿಸಿ ಮದ್ಯದ ಮಾದರಿಯನ್ನು ರಾಸಾಯನಿಕ ತಜ್ಞರ ವಿಶ್ಲೇಷಣೆಗೆ ಒಳಪಡಿಸಿದ್ದು, ಜಪ್ತಿಪಡಿಸಿರುವ ದ್ರವ್ಯವು ಮದ್ಯವೆಂದು ಇದರ ತೀಕ್ಷ್ಣತೆಯು 42.0 ಯುಪಿ ಮದ್ಯಸಾರದ ಅಂಶ ಇದ್ದು, ಮದ್ಯವು ಕೀಳು ಮಟ್ಟದ್ದಾಗಿರುವುದಾಗಿ ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಈ ಪ್ರಕರಣದ ಆರೋಪಿಗಳಿಗೆ ದಿನಾಂಕ: 17.12.2004 ರಂದು ಪ್ರಾಧಿಕಾರವು ಕಾರಣಕೇಳಿ ನೋಟೀಸು ನೀಡಲಾಗಿದ್ದು, ಸದರಿ ಕಾರಣ ಕೇಳಿ ನೀಡಿದ ನೋಟೀಸ್‌ಗಳನ್ನು ಆರೋಪಿಗಳಿಗೆ ದಿನಾಂಕ: 24.12.2004 ರಂದು ಜಾರಿಯಾಗಿರುತ್ತದೆ.

ಈ ಪ್ರಕರಣವನ್ನು ಪತ್ತೆ ಹಚ್ಚಿ ಈಗಾಗಲೇ (6) ತಿಂಗಳು ಕಳೆದಿದ್ದರೂ ಈವರೆವಿಗೂ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನವು ತನ್ನದೆಂದು ಕೋರಿ ಯಾವುದೇ ಅರ್ಜಿ ಸಲ್ಲಿಸಿರುವುದಿಲ್ಲ. ಈ ಪ್ರಾಧಿಕಾರದಿಂದ ಕಾರಣಕೇಳಿ ನೋಟೀಸು ಜಾರಿಯಾಗಿದ್ದರೂ (24-12-2004) ಕೂಡ ವಾಹನದ ಮಾಲೀಕತ್ವವನ್ನು ಕೋರಿ ಹಕ್ಕು ಚಲಾಯಿಸಿರುವುದಿಲ್ಲ.

ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲಿಸುವಾಗ ಅಪರಾಧಿಗಳು ಪತ್ತೆಯಾಗದಿದ್ದಲ್ಲಿ ತದನಂತರ ಪತ್ತೆಯಾಗುವ ಸಾಧ್ಯತೆಗಳಿಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿ (1) ತಿಂಗಳೊಳಗೆ ಯಾವುದೇ ವ್ಯಕ್ತಿಯು ಸ್ವತ್ತು ತನ್ನದೆಂದು ಅದು ಕಾನೂನು ಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಹಾಜರಾಗದೇ ಇದ್ದಲ್ಲಿ ಸದರಿ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸ್ವತ್ತುಗಳಾಗದಿದ್ದಲ್ಲಿ ಅಂತಹ ಸ್ವತ್ತುಗಳನ್ನು ಮತ್ತು ಅಕ್ರಮ ಸಾಗಾಣಿಕೆ ಉಪಯೋಗಿಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಈ ಪ್ರಕರಣವನ್ನು ಪತ್ತೆ ಹಚ್ಚಿ (6) ತಿಂಗಳ ಅವಧಿ ಮುಗಿದಿದ್ದರೂ ಮತ್ತು ಈ ಪ್ರಕರಣದ ಆರೋಪಿಗಳಿಗೆ ಈ ಪ್ರಾಧಿಕಾರವು ಕಾರಣಕೇಳಿ ನೋಟೀಸು ನೀಡಿದ್ದರೂ ಈವರೆಗೆ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಜಪ್ತಿಪಡಿಸಿರುವ ವಾಹನವನ್ನು ಕೋರಿ ಯಾವುದೇ ಅರ್ಜಿಸಲ್ಲಿಸದೇ ಇರುವುದನ್ನು ಗಮನಿಸಿದಾಗ ಈ ಅಕ್ರಮ ಕೃತ್ಯವು ವಾಹನ ಮಾಲೀಕನ ತಿಳುವಳಿಕೆಯಿಂದಲೇ ನಡೆದಿದೆ ಎಂದು ಈ ಪ್ರಾಧಿಕಾರವು ಭಾವಿಸಬೇಕಾಗುತ್ತದೆ. ಅಲ್ಲದೆ ದಿನಾಂಕ: 10.9.2004 ರಂದು ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ-ಇವರು ಅಕ್ರಮವಾಗಿ ಸಾಗಣೆಯಾಗುತ್ತಿದ್ದ ಮದ್ಯವನ್ನು ಪತ್ತೆ ಹೆಚ್ಚಿ ಸ್ಥಳಮಹಜರಿನ ಮೂಲಕ ಅಕ್ರಮ ಮದ್ಯ ಹಾಗೂ ಮದ್ಯ ಸಾಗಣೆ ಮಾಡುತ್ತಿದ್ದ ವಾಹನವನ್ನು ಜಪ್ತಿಪಡಿಸಿ ಮೊಕದ್ದಮೆ ದಾಖಲು ಪಡಿಸಿರುತ್ತಾರೆ ಮತ್ತು ಜಪ್ತಿಪಡಿಸಿದ ದ್ರವ್ಯದ ಮಾದರಿಯು ರಾಸಾಯನಿಕ ತಜ್ಞರ ವರದಿಯಂತೆ ಮದ್ಯವೆಂದು ದೃಢಪಟ್ಟಿರುತ್ತದೆ. ಹಾಗೂ ಅಕ್ರಮ ಮದ್ಯ ಸಾಗಣೆಯಾಗಿರುವುದು ಸಾಬೀತಾಗಿರುತ್ತದೆ ಈ ಹಿನ್ನೆಲೆಯಲ್ಲಿ ಹಾಗೂ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಈ ಪ್ರಕರಣದಲ್ಲಿ ಜಪ್ತಿಪಡಿಸಿರುವ ವಾಹನವನ್ನು ಹಾಗೂ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತ ಎಂದು ಕಂಡು ಬಂದಿರುತ್ತದೆ. ಆದ್ದುದರಿಂದ ಈ ಕೆಳಗಿನ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/36/04-05, ದಿನಾಂಕ: 25ನೇ ಫೆಬ್ರವರಿ 2005**

ಮೇಲ್ಕಂಡ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಗೋವಿಂದಪ್ಪ, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಬಿ)ರ ಅಡಿಯಲ್ಲಿ ಅನುಸರಿಸಬೇಕಾದ ವಿಧಿವಿಧಾನಗಳನ್ನು ಅನುಸರಿಸಿ ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, - ರವರ ಪ್ರ.ಮಾ.ವ. ಸಂಖ್ಯೆ 4/2004-05, ದಿನಾಂಕ: 10.9.2004ರಲ್ಲಿ ವಶಪಡಿಸಿಕೊಂಡ ವಾಹನ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ-02/ಯು-563ನ್ನು ಮತ್ತು 21.600 ಲೀ. ನಕಲಿ ಮದ್ಯವನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಜಪ್ತಿಪಡಿಸಿರುವ ಮದ್ಯವು ರಾಸಾಯನಿಕ ತಜ್ಞರ ವರದಿಯಂತೆ ಕಡಿಮೆ ತೀಕ್ಷ್ಣತೆಯನ್ನು ಹೊಂದಿದ್ದು ಕಳಪೆ ಮಟ್ಟದ್ದಾಗಿದ್ದು ಮಾನವ ಸೇವನೆಗೆ ಯೋಗ್ಯವಲ್ಲದ ಕಾರಣ ಮದ್ಯವನ್ನು ನಾಶಪಡಿಸಲು ಆದೇಶಿಸಿದೆ.

ಆದೇಶವನ್ನು ಇಂದು ಅಂದರೆ ದಿನಾಂಕ: 25.2.2005 ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು,
ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್. 544

**ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧೀಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯ**

**ಫಿರ್ಯಾದುದಾರರು**
ಅಬಕಾರಿ ನಿರೀಕ್ಷಕರು,
ನಂ.2, ಗುಪ್ತವಾರ್ತಾವಿಭಾಗ, ಮೈಸೂರು

**ಪ್ರತಿವಾದಿಗಳು**
1. ಅಸ್ಲಂ ಬಿನ್ ಜಾನ್‌ಶಾಬ್, ನಂ.84/28 ಅಜಾದ್ ನಗರ, ಜೈಲ್ ರಸ್ತೆ, ನಂಜನಗೂಡು.
2. ಜಾವೀದ್ ಬಿನ್ ಅಮೀರ್‌ಸಾಬ್ ಅಜಾದ್ ನಗರ, ಜೈಲ್ ರಸ್ತೆ, ನಂಜನಗೂಡು.
3. ಬೆಟ್ಟೇಗೌಡ ಬಿನ್ ನಾರಾಯಣ, ಶ್ರೀನಿವಾಸ್ ರೈಸ್‌ಮಿಲ್ ಬಳಿ ಹನಕೆರೆ ಗ್ರಾಮ ಕಸಬಾ ಹೋಬಳಿ, ಮಂಡ್ಯ ತಾಲ್ಲೂಕು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:20.11.2004 ರಂದು ಬೆಳಗಿನ ಜಾವ 4-30 ಗಂಟೆಯಲ್ಲಿ ಅಬಕಾರಿ ನಿರೀಕ್ಷಕರು, ನಂ.2. ಗುಪ್ತವಾರ್ತಾ ವಿಭಾಗ, ಮೈಸೂರು - ಇವರು ಶ್ರೀರಂಗಪಟ್ಟಣ ಟೌನ್ ಮೈಸೂರು - ಬೆಂಗಳೂರು ಮುಖ್ಯರಸ್ತೆಯ ಪಶ್ಚಿಮವಾಹಿನಿ ಸೇತುವೆ ಹತ್ತಿರ ವಾಹನ ಅಂಬಾಸಿಡರ್ ಕಾರ್ ಸಂಖ್ಯೆ: ಸಿಎಸಿ-5359ರಲ್ಲಿ ಅಕ್ರಮವಾಗಿ ತಲಾ 35 ಲೀ. ನಂತೆ 5 ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ಒಟ್ಟು 175 ಲೀ ಮದ್ಯಸಾರವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆಹಚ್ಚಿ ವಾಹನ ಮತ್ತು ಮದ್ಯಸಾರವನ್ನು ಜಪ್ತಿ ಮಾಡಿ ಪ್ರಕರಣ ಸಂಖ್ಯೆ: 75/2004-05ರ ಮೂಲಕ ಪ್ರಕರಣವನ್ನು ದಾಖಲುಪಡಿಸಿ ಮುಂದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು, ಶ್ರೀರಂಗಪಟ್ಟಣ ವಲಯ - ಇವರಿಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಶ್ರೀರಂಗಪಟ್ಟಣ, - ಇವರು ಪ್ರಕರಣದ ತನಿಖೆಯನ್ನು ಆರಂಭಿಸಿ ಮದ್ಯದ ಮಾದರಿಯನ್ನು ರಾಸಾಯನಿಕ ತಜ್ಞರ ವಿಶ್ಲೇಷಣೆಗೆ ಒಳಪಡಿಸಿದ್ದು, ರಾಸಾಯನಿಕ ತಜ್ಞರ ವರದಿಯಂತೆ ಮದ್ಯಸಾರವು ಮಾನವ ಸೇವನೆಗೆ ಯೋಗ್ಯವಾಗಿ ಕಂಡು ಬಂದ ಹಿನ್ನೆಲೆಯಲ್ಲಿ ಸದರಿ ಮದ್ಯಸಾರವನ್ನು ಮೆ: ವಿಲ್ಸನ್ ಡಿಸ್ಟಿಲರಿ ಗೆಂಡೆಹೊಸಹಳ್ಳಿ - ಇವರಿಗೆ ಸಾರಾಯಿ ತಯಾರಿಕೆಗಾಗಿ ಹಂಚಿಕೆ ಮಾಡಿ ಮದ್ಯಸಾರವನ್ನು ವಿಲೇವಾರಿ ಮಾಡಲಾಗಿದೆ.

ಪ್ರಕರಣದ ಆರೋಪಿಗಳಿಗೆ ದಿನಾಂಕ: 17.12.2004 ರಂದು ಪ್ರಾಧಿಕಾರವು ಕಾರಣಕೇಳಿ ನೋಟೀಸು ನೀಡಲಾಗಿದ್ದು, ಸದರಿ ಕಾರಣ ಕೇಳಿ ನೀಡಿದ ನೋಟೀಸ್‌ಗಳು ಪ್ರಕರಣದ ಮೂರು ಆರೋಪಿಗಳಿಗಳೂ ಜಾರಿಯಾಗಿರುತ್ತವೆ. ಹಾಗೂ ಸ್ವೀಕೃತಿಗಳು ಈ ಪ್ರಾಧಿಕಾರಕ್ಕೆ ತಲುಪಿರುತ್ತವೆ.

ಈ ಪ್ರಕರಣವನ್ನು ಪತ್ತೆ ಹಚ್ಚಿ ಈಗಾಗಲೇ (4) ತಿಂಗಳು ಕಳೆದಿದ್ದು ಈ ಪ್ರಾಧಿಕಾರವು ನೀಡಲಾದ ಕಾರಣಕೇಳಿ ನೋಟೀಸುಗಳು ದಿನಾಂಕ: 29.12.2004 ರಂದು ಜಾರಿಯಾಗಿದ್ದರೂ ಈವರೆವಿಗೆ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನವು ತನ್ನದೆಂದು ಕೋರಿ ಯಾವುದೇ ಅರ್ಜಿ ಸಲ್ಲಿಸಿರುವುದಿಲ್ಲ.

ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲಿಸುವಾಗ ಅಪರಾಧಿಗಳು ಪತ್ತೆಯಾಗದಿದ್ದಲ್ಲಿ ತದನಂತರ ಪತ್ತೆಯಾಗುವ ಸಾಧ್ಯತೆಗಳಿಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿ (1) ತಿಂಗಳೊಳಗೆ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಜಪ್ತಿ ಮಾಡಿಸಲಾಗಿರುವ ಸ್ವತ್ತು ತನ್ನದೆಂದು ಅದು ಕಾನೂನು ಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಹಾಜರಾಗದೇ ಇದ್ದಲ್ಲಿ ಸದರಿ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸ್ವತ್ತುಗಳಾಗಿದ್ದಲ್ಲಿ ಅಂತಹ ಸ್ವತ್ತುಗಳನ್ನು ಮತ್ತು ಅಕ್ರಮ ಸಾಗಣೆಗೆ ಉಪಯೋಗಿಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಈ ಪ್ರಕರಣವನ್ನು ಪತ್ತೆ ಹಚ್ಚಿ (4) ತಿಂಗಳ ಅವಧಿ ಮುಗಿದಿದ್ದರೂ ಮತ್ತು ಈ ಪ್ರಕರಣದ ಆರೋಪಿಗಳಿಗೆ ಈ ಪ್ರಾಧಿಕಾರವು ಕಾರಣಕೇಳಿ ನೋಟೀಸುಗಳನ್ನು ನೀಡಿದ್ದು, ಅವುಗಳು ಸ್ವೀಕೃತಗೊಂಡಿದ್ದರೂ ಈವರೆಗೆ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಅರ್ಜಿಯನ್ನು ಸಲ್ಲಿಸಿ ಜಪ್ತಿಪಡಿಸಿರುವ ವಾಹನವನ್ನು ಕೋರಿ ಯಾವುದೇ ಹಕ್ಕನ್ನು ಚಲಾಯಿಸದೇ ಇರುವುದನ್ನು ಗಮನಿಸಿದಾಗ ಈ ಪ್ರಕರಣದಲ್ಲಿ ಜಪ್ತಿಗೊಳಿಸಿರುವ ವಾಹನದ ಮಾಲೀಕನು ತನ್ನ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಮದ್ಯಸಾರ ಸಾಗಣಿಕೆಗೆ ಉಪಯೋಗಿಸಿರುವುದು ಸ್ಪಷ್ಟವಾಗುತ್ತದೆ. ಅಲ್ಲದೆ ದಿನಾಂಕ: 20.11.2004 ರಂದು ಬೆಳಗಿನ ಜಾವ 4.30ಕ್ಕೆ ಅಬಕಾರಿ ನಿರೀಕ್ಷಕರು ನಂ.2, ಗುಪ್ತವಾರ್ತಾ ದಳ, ಮೈಸೂರು - ಇವರು ಅಕ್ರಮ ಮದ್ಯಸಾರ ಸಾಗಣೆಯಾಗುತ್ತಿದ್ದನ್ನು ಪತ್ತೆ ಹಚ್ಚಿ ಸ್ಥಳಮಹಜರಿನ ಮೂಲಕ ಅಕ್ರಮ ಮದ್ಯಸಾರವನ್ನು ಹಾಗೂ ಸಾಗಣೆ ಮಾಡುತ್ತಿದ್ದ ವಾಹನವನ್ನು ಜಪ್ತಿಗೊಳಿಸಲಾಗಿದ್ದು, ಜಪ್ತಿ ಗೊಳಿಸಲಾಗಿರುವ ದ್ರವ್ಯವು ರಾಸಾಯನಿಕ ತಜ್ಞರು ನೀಡಿರುವ ಪ್ರಕಾರ ಮದ್ಯಸಾರವೆಂದು ದೃಢಪಟ್ಟಿರುವುದರಿಂದ ದಿನಾಂಕ 20.11.2004ರಂದು ಜಪ್ತಿಪಡಿಸಲಾಗಿರುವ ವಾಹನದಲ್ಲಿ ಅಕ್ರಮ ಮದ್ಯಸಾರವು ಸಾಗಣೆಕೆಯಾಗಿರುವುದು ನಿಸ್ಸಂಶಯವಾಗಿ ಸಾಬೀತಾಗಿರುತ್ತದೆ. ಅಲ್ಲದೇ ವಾಹನವನ್ನು ತೆರೆದ ಜಾಗದಲ್ಲಿ ನಿಲ್ಲಿಸಿದ್ದು, ಬಿಸಿಲು, ಮಳೆ ಮುಂತಾದ ಪ್ರಾಕೃತಿಕ ವೈಪರಿತ್ಯಗಳಿಗೆ ತುತ್ತಾಗಿ ವಾಹನವು ದಿನೇ ದಿನೇ ತನ್ನ ಗುಣಮಟ್ಟವನ್ನು ಕಳೆದುಕೊಂಡು ಅದರ ಮೌಲ್ಯವು ಕಡಿಮೆಯಾಗಿರುವ ಸಾಧ್ಯತೆಗಳು ಇರುವುದರಿಂದ ಹಾಗೂ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಈ ಪ್ರಕರಣದಲ್ಲಿ ಜಪ್ತಿಪಡಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತ ಎಂದು ಕಂಡು ಬಂದಿರುತ್ತದೆ. ಆದ್ದುದರಿಂದ ಈ ಕೆಳಗಿನ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/78/04-05, ದಿನಾಂಕ: 24ನೇ ಫೆಬ್ರವರಿ 2005**

ಮೇಲ್ಕಂಡ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಗೋವಿಂದಪ್ಪ, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಬಿ)ರ ಅಡಿಯಲ್ಲಿ ಅನುಸರಿಸಬೇಕಾದ ವಿಧಿವಿಧಾನಗಳನ್ನು ಅನುಸರಿಸಿ ಫಿರ್ಯಾದುದಾರರು ಮೊಕದ್ದಮೆ ಸಂಖ್ಯೆ: 75/2004-05 ದಿನಾಂಕ: 20.11.2004ರಲ್ಲಿ ಮೂಲಕ ವಶಪಡಿಸಿಕೊಂಡ ವಾಹನ ಅಂಬಾಸಿಡರ್ ಕಾರ್ ಸಂಖ್ಯೆ: ಸಿಎಸಿ-5359ನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಆದೇಶವನ್ನು ಇಂದು ಅಂದರೆ ದಿನಾಂಕ: 24.2.2005 ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು,
ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್. 545

**ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧೀಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯ**

**ಫಿರ್ಯಾದುದಾರರು**
ಅಬಕಾರಿ ನಿರೀಕ್ಷಕರು,
ಮಂಡ್ಯ ವಲಯ

**ಪ್ರತಿವಾದಿಗಳು**
ಎಂ.ವಿ. ತುಳಸೀಗೌಡ ಬಿನ್ ವೆಂಕಟಗಿರಿಗೌಡ,
ಹೆಚ್. ಮಲ್ಲಿಗೆರೆ ಗ್ರಾಮ, ಮಂಡ್ಯ ತಾಲ್ಲೂಕು

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:15.10.2004 ರಂದು ಮಧ್ಯಾಹ್ನ 3-30 ಗಂಟೆಯಲ್ಲಿ ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ - ಇವರು ಮಂಡ್ಯ ಸಿಟಿ, ಹೊಳಲು ಸರ್ಕಲ್ ಬಳಿ, ವಾಹನ ಟಿವಿಎಸ್-50 ಎಕ್ಸ್‌ಎಲ್ ಸಂಖ್ಯೆ: ಸಿಕೆಡಬ್ಲ್ಯೂ-721 ರಲ್ಲಿ ಅಕ್ರಮವಾಗಿ 8,640 ಲೀ. (ಹೊರರಾಜ್ಯದ) ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆಹಚ್ಚಿ ವಾಹನ ಮತ್ತು ಮದ್ಯವನ್ನು ಜಪ್ತಿ ಮಾಡಿ ಪ್ರಕರಣ ಸಂಖ್ಯೆ: 6/2004-05ರ ದಿನಾಂಕ:15.10.2005ರ ಮೂಲಕ ಮೊಕದ್ದಮೆ ದಾಖಲಿಸಿರುತ್ತಾರೆ.

ಈ ಪ್ರಾಧಿಕಾರವು ಪ್ರಕರಣದ ಆರೋಪಿಗೆ ಕಾರಣಕೇಳಿ ನೋಟೀಸು ನೀಡಿದ್ದು ಸದರಿ ನೋಟೀಸು ದಿನಾಂಕ 22.12.2004ರಂದು ಜಾರಿಯಾಗಿರುತ್ತದೆ.

ಈ ಪ್ರಕರಣವನ್ನು ದಾಖಲಿಸಿ (5) ತಿಂಗಳು ಕಳೆದಿದ್ದರೂ ಹಾಗೂ ಪ್ರಕರಣದ ಆರೋಪಿಗೆ ಕಾರಣ ಕೇಳಿ ನೋಟೀಸನ್ನು ಜಾರಿ ಮಾಡಿ ಸುಮಾರು ಮೂರು ತಿಂಗಳು ಅವಧಿ ಕಳೆದಿದ್ದರೂ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಜಪ್ತಿಪಡಿಸಿರುವ ವಾಹನವು ತನ್ನದೆಂದು ಕೋರಿ ಅರ್ಜಿ ಸಲ್ಲಿಸಿರುವುದಿಲ್ಲ.

ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲಿಸುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಹಾಗೂ ವಾಹನವನ್ನು ಜಪ್ತಿಪಡಿಸಿದ ಒಂದು ತಿಂಗಳೊಳಗೆ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಜಪ್ತಿಪಡಿಸಲಾಗಿರುವ ಸ್ವತ್ತುಗಳು ತನ್ನವೆಂದು ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷ್ಯಾದಾರಗಳೊಂದಿಗೆ ಹಾಜರಾಗದಿದ್ದಲ್ಲಿ ಸದ್ರಿ ಸ್ವತ್ತುಗಳು ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ವಸ್ತುಗಳಾಗಿದ್ದಲ್ಲಿ ಅಂತಹಾ ವಸ್ತುಗಳನ್ನು ಹಾಗೂ ಅಕ್ರಮ ಸಾಗಾಣಿಗೆ ಬಳಸಿದ ವಾಹನವನ್ನು ಕಲಂ 43 (ಎ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಈ ಪ್ರಕರಣವನ್ನು ದಾಖಲುಪಡಿಸಿ (5) ತಿಂಗಳು ಕಳೆದಿದ್ದರೂ ಈವರೆಗೆ ವಾಹನವನ್ನು ತನ್ನದೆಂದು ಕೋರಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನದ ಬಿಡುಗಡೆಗೆ ಅರ್ಜಿಯನ್ನು ಸಲ್ಲಿಸದೇ ಇರುವುದನ್ನು ಗಮನಿಸಿದಾಗ ವಾಹನ ಮಾಲೀಕನು ತನ್ನ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಮದ್ಯ ಸಾಗಣಿಕೆಗೆ ಬಳಸಿರುವುದು ಮನದಟ್ಟಾಗುತ್ತದೆ. ಅಲ್ಲದೆ ದಿನಾಂಕ 15.10.2004 ರಂದು ಅಬಕಾರಿ ನಿರೀಕ್ಷಕರು, ಅಕ್ರಮ ಮದ್ಯ ಸಾಗಾಣಿಕೆಯಾಗುತ್ತಿದ್ದದನ್ನು ಪತ್ತೆ ಹೆಚ್ಚಿ ಸ್ಥಳ ಮಹಜರಿನ ಮೂಲಕ ವಾಹನವನ್ನು ಮತ್ತು ಅಕ್ರಮ ಮದ್ಯವನ್ನು ಜಪ್ತಿಗೊಳಿಸಿದ್ದು ಜಪ್ತಿಗೊಳಿಸಲಾದ ಮಾದರಿಯು ರಾಸಾಯನಿಕ ತಜ್ಞರ ವರದಿಯಂತೆ ಮದ್ಯವಾಗಿರುವುದು ದೃಢಪಟ್ಟಿರುವುದರಿಂದ ವಾಹನ ಮಾಲೀಕನು ಈ ಅಕ್ರಮ ಮದ್ಯ ಸಾಗಣಿಕೆಗೆ ಉಪಯೋಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/58/04-05, ದಿನಾಂಕ: 24ನೇ ಫೆಬ್ರವರಿ 2005**

ಮೇಲ್ಕಂಡ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಗೋವಿಂದಪ್ಪ, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಬಿ)ರ ಅಡಿಯಲ್ಲಿ ಅನುಸರಿಸಬೇಕಾದ ವಿಧಿವಿಧಾನಗಳನ್ನು ಅನುಸರಿಸಿ ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ರವರ ಪ್ರ.ಮಾ.ವ. ಸಂಖ್ಯೆ 6/2004-05 ದಿನಾಂಕ: 15.10.2004ರಲ್ಲಿ ವಶಪಡಿಸಿಕೊಂಡ ವಾಹನ ಟಿ.ವಿ.ಎಸ್.50-ಎಕ್ಸ್‌ಎಲ್ ಸಂಖ್ಯೆ ಸಿಕೆಡಬ್ಲ್ಯೂ-721ನ್ನು ಮತ್ತು 8,640 ಲೀ. ಮದ್ಯವನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಜಪ್ತಿಪಡಿಸಿರುವ ಮದ್ಯವು ಮಾನವ ಸೇವನೆಗೆ ಯೋಗ್ಯವಾದರೂ ಕರ್ನಾಟಕ ರಾಜ್ಯದಲ್ಲಿ ಮಾರಾಟಕ್ಕೆ ನಿಷಿದ್ಧವಾದ್ದರಿಂದ ಕಲಂ 43 (ಎ) 2ರ ಅಡಿಯಲ್ಲಿ ನಾಶಪಡಿಸಲು ಆದೇಶಿಸಿದೆ.

ಆದೇಶವನ್ನು ಇಂದು ಅಂದರೆ ದಿನಾಂಕ: 25.2.2005 ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು,
ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್. 546

**ಪೊಲೀಸ್ ಕಮೀಷನರ್ ರವರ ಕಛೇರಿ,**
**ನಂ.1, ಇನ್ ಫೆಂಟ್ರಿ ರಸ್ತೆ, ಬೆಂಗಳೂರು ನಗರ,**
**ಅಧಿಸೂಚನೆ ಸಂಖ್ಯೆ.8/ಸಂವಿ/ಸಿ.ಓ.ಪಿ/2005 ದಿನಾಂಕ: 15ನೇ ಮಾರ್ಚ್ 2005**

ಬೆಂಗಳೂರು ನಗರ ಮಹಾತ್ಮಗಾಂಧಿ ರಸ್ತೆಯ ಟ್ರಿನಿಟಿ ವೃತ್ತದಿಂದ ಪ್ರಾರಂಭವಾಗುವ ವಿಮಾನ ನಿಲ್ದಾಣ ರಸ್ತೆಯ ಸುರಂಜನ್‌ದಾಸ್ ರಸ್ತೆ ವರೆಗೆ ವಾಹನಗಳ ಸಂಚಾರ ದಟ್ಟಣೆಯು ದಿನದಿಂದ ದಿನಕ್ಕೆ ಅಧಿಕಗೊಂಡು ವಾಹನಗಳು ವೇಗವಾಗಿ ಚಲಿಸಲು ಸಾಧ್ಯವಾಗದೆ ಸುಗಮ ಸಂಚಾರಕ್ಕೆ ಅಡ್ಡಿ ಉಂಟಾಗುತ್ತಿರುವುದು ಹಾಗೂ ಹೆಚ್ಚಿನ ಅಪಘಾತಗಳು ಸಂಭವಿಸುತ್ತಿರುವುದು ಕಂಡುಬಂದಿರುತ್ತದೆ. ಈ ರಸ್ತೆಯು ಗಣ್ಯ ವ್ಯಕ್ತಿಗಳು ಮತ್ತು ಅತಿಗಣ್ಯ ವ್ಯಕ್ತಿಗಳ ಸಂಚರಿಸುವ ಏಕಮಾತ್ರ ರಸ್ತೆಯಾಗಿರುತ್ತೆ. ಈ ರಸ್ತೆಯಲ್ಲಿ ಸಾರ್ವಜನಿಕ ಹಿತಾಸಕ್ತಿ ಗಮನಿಸಿ ಸಾರ್ವಜನಿಕ ವಾಹನಗಳ ಸುಗಮ ಸಂಚಾರಕ್ಕೆ ಹಾಗೂ ಸಂಭವಿಸುತ್ತಿರುವ ರಸ್ತೆ ಅಪಘಾತಗಳನ್ನು ತಹಬಂದಿಗೆ ತರಲು ಈ ರಸ್ತೆಯಲ್ಲಿ ಸರಕು ಸಾಗಣೆ ವಾಹನಗಳ ಸಂಚಾರವನ್ನು ಬೆಳಿಗ್ಗೆ ಮತ್ತು ಸಂಜೆ ವೇಳೆಗಳಲ್ಲಿ ನಿಷೇಧಿಸುವುದು ಹಾಗೂ ವಿಮಾನ ನಿಲ್ದಾಣ ರಸ್ತೆಯ ಕೋಡಿಹಳ್ಳಿ ಜಂಕ್ಷನ್, ಮುರುಗೇಶ್‌ಪಾಳ್ಯ ಮತ್ತು ಮಣಿಪಾಲ್ ಆಸ್ಪತ್ರೆ ಜಂಕ್ಷನ್‌ಗಳಲ್ಲಿನ ರಸ್ತೆ ವಿಭಾಜಕಗಳಲ್ಲಿರುವ ರಸ್ತೆ ತಿರುವುಗಳನ್ನು ಮುಚ್ಚಿ ಈ ಸ್ಥಳಗಳಲ್ಲಿ ವಾಹನಗಳು ತಿರುವುಗಳನ್ನು ಪಡೆದು ಉಂಟಾಗುತ್ತಿರುವ ಸಂಚಾರ ಸ್ಥಗಿತ ಮತ್ತು ಅಪಘಾತಗಳನ್ನು ನಿಯಂತ್ರಿಸಿ ಸಾರ್ವಜನಿಕ ವಾಹನಗಳ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವುದು ಅವಶ್ಯಕವಾಗಿ ಕಂಡುಬಂದಿರುತ್ತೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧಗಳನ್ನು ಆದೇಶಿಸಿರುತ್ತೇನೆ.

1. ಬೆಂಗಳೂರು ನಗರ ಮಹಾತ್ಮಗಾಂಧಿ ರಸ್ತೆಯ ಟ್ರಿನಿಟಿ ವೃತ್ತದಿಂದ ವಿಮಾನ ನಿಲ್ದಾಣ ರಸ್ತೆಯ ಸುರಂಜನ್ ದಾಸ್ ರಸ್ತೆ ನಡುವೆ ಬೆಳಿಗ್ಗೆ 8-00 ಗಂಟೆಯಿಂದ 11-00 ಗಂಟೆ ವರೆಗೆ ಮತ್ತು ಸಂಜೆ 4-30 ಗಂಟೆಯಿಂದ 8-00 ಗಂಟೆ ವರೆಗೆ ಸರಕು ಸಾಗಣೆ ವಾಹನಗಳ ಸಂಚಾರವನ್ನು ನಿಷೇಧಿಸಲಾಗಿದೆ.

2. ವಿಮಾನ ನಿಲ್ದಾಣ ರಸ್ತೆಯ ಕೋಡಿಹಳ್ಳಿ ಜಂಕ್ಷನ್ ಹಾಗೂ ಮುರುಗೇಶ್ ಪಾಳ್ಯ ಜಂಕ್ಷನ್ ಬಳಿಯಲ್ಲಿ ಇರುವ ರಸ್ತೆ ವಿಭಾಜಕಗಳಲ್ಲಿನ ತೆರವುಗಳಲ್ಲಿ ಮುಚ್ಚಲು ಆದೇಶಿಸಲಾಗಿದೆ.

3. ವಿಮಾನ ನಿಲ್ದಾಣ ರಸ್ತೆಯ ಮಣಿಪಾಲ್ ಆಸ್ಪತ್ರೆ ಬಳಿ ಇರುವ ರಸ್ತೆ ವಿಭಾಜಕ ತೆರವನ್ನು ಮುಚ್ಚಿ ಇದೇ ರಸ್ತೆಯಲ್ಲಿ ವಿಮಾನ ನಿಲ್ದಾಣದ ಕಡೆಗೆ 20 ಮೀಟರ್ ದೂರದಲ್ಲಿ ಸಾರ್ವಜನಿಕರ ವಾಹನಗಳು 'U' ತಿರುವು ಪಡೆಯಲು ರಸ್ತೆ ವಿಭಾಜಕವನ್ನು ತೆರವುಗೊಳಿಸಿ ಸಂಚಾರಕ್ಕೆ ಅನುವು ಮಾಡಿಕೊಡಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 25.3.2005 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 15.3.2005 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**

ಪಿ.ಆರ್. 547 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಇವರ ನ್ಯಾಯಾಲಯದಲ್ಲಿ**
**ನಂ.132, 2ನೇ ಮಹಡಿ, ಕೆಂಗಲ್ ಹನುಮಂತಯ್ಯ ರಸ್ತೆ, ಬೆಂಗಳೂರು - 560 027**
**ವ್ಯಾಜ್ಯ ಸಂಖ್ಯೆ: ಜೆ.ಆರ್.ಡಿ/ಯು.ಬಿ.ಎಫ್/660/2004-05**

**ಅರ್ಜಿದಾರರು:**
1) ವ್ಯವಸ್ಥಾಪಕರು,
ಶ್ರೀ ಮುರುಘರಾಜೇಂದ್ರ ಸಹಕಾರ ಬ್ಯಾಂಕ್ ನಿ.,
ದಾವಣಗೆರೆ

**ವಿರುದ್ಧ**

**ಎದುರು ಅರ್ಜಿದಾರರು**
1. ಶ್ರೀ ಬಿ.ಎನ್. ಸುಬ್ರಮಣ್ಯ, ಮಾಲೀಕರು
ಮೆ: ಶ್ರೀ ಸುಬ್ರಮಣ್ಯ ಟ್ರೇಡರ್ಸ್, ಮರ್ಚೆಂಟ್ಸ್ ಮತ್ತು ಕಮಿಶನ್ ಏಜೆಂಟ್ಸ್, ನಂ.520/21-ಬಿ, ಬಿ.ಟಿ. ಗಲ್ಲಿ, ದಾವಣಗೆರೆ.
2. ಶ್ರೀಮತಿ ಬಿ.ಎಸ್. ಕಸ್ತೂರಿ,
ಕೋಂ ಲೇಟ್ ಬಿ. ನಾಗರಾಜ ಶೆಟ್ಟಿ,
3. ಶ್ರೀ ಬಿ.ಎನ್. ಶ್ರೀನಿವಾಸ್, ಬಿನ್ ಲೇಟ್ ಬಿ. ನಾಗರಾಜ ಶೆಟ್ಟಿ,
4. ಶ್ರೀ ಬಿ.ಎನ್. ಸುಬ್ರಮಣ್ಯ
ಎಲ್ಲರ ವಾಸದ ವಿಳಾಸ: ಮನೆ ನಂ.79/, ಶ್ರೀನಿವಾಸ ನಿಲಯ, 1ನೇ ಮುಖ್ಯರಸ್ತೆ, 1ನೇ ಅಡ್ಡರಸ್ತೆ, ರೈತರ ಬೀದಿ, ಪಿ.ಜೆ. ಎಕ್ಸ್‌ಟೆನ್‌ಷನ್, ದಾವಣಗೆರೆ - 577 002.
5. ಶ್ರೀ ಬಿ. ವರದರಾಜ ಶೆಟ್ಟಿ,
ಬಿನ್ ಬೆಲ್ಲಾರಿ ವೆಂಕಟಸ್ವಾಮಿ ಶೆಟ್ಟಿ, ಮನೆ ನಂ.217/2ಎ, 3ನೇ ಮುಖ್ಯರಸ್ತೆ, 3ನೇ ಕ್ರಾಸ್, ಪಿ.ಜೆ. ಎಕ್ಸ್‌ಟೆನ್‌ಷನ್, ದಾವಣಗೆರೆ - 577 002.
6. ಶ್ರೀ ಎಂ.ಎಸ್. ನಾಗರಾಜ್,
ಬಿನ್ ಎಂ.ಎಸ್. ಮಲ್ಲಿಕಾರ್ಜುನಪ್ಪ, ನಂ.598/2, ಟಿ.ಪಿ. ಕಾಂಪೌಂಡ್, ಕೈಪೇಟೆ, ದಾವಣಗೆರೆ - 577 001

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರೀತ್ಯ ಸ್ಥಿರಾಸ್ತಿಯನ್ನು ತೀರ್ಪು ಪೂರ್ವ ಜಪ್ತಿ ಮಾಡಿರುವ ಬಗ್ಗೆ ನೋಟೀಸು**

1. ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70 ರನ್ವಯ ದಾಖಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ದಿನಾಂಕ 31.12.2004ರವರೆಗೆ ಬಡ್ಡಿ ಸೇರಿ ಒಟ್ಟು ರೂ.32,54,459.00 (ಮೂವತ್ತೆರಡು ಲಕ್ಷದ ಐವತ್ನಾಲ್ಕು ಸಾವಿರದ ನಾಲ್ಕುನೂರಾ ಐವತ್ತೊಂಬತ್ತುಗಳು ಮಾತ್ರ) ಗಳನ್ನು ಹಾಗೂ ದಿನಾಂಕ 14.3.2005 ರಿಂದ ಶೇ.16 ರಂತೆ ಬಡ್ಡಿಯೊಂದಿಗೆ ವಸೂಲು ಮಾಡಲು ವಾದಿಪರ ತೀರ್ಪು ಮತ್ತು ಡಿಕ್ರಿ ಮಾಡಲು ಕೋರಿರುತ್ತಾರೆ.

2. ವಾದಿಯ ಈ ದಾವಾ ಅರ್ಜಿಯನ್ನು ದಾವೆ ಸಂಖ್ಯೆ: ಜೆಆರ್‌ಡಿ/ಯುಬಿಎಫ್/660/2004-05 ರನ್ವಯ ಈ ನ್ಯಾಯಾಲಯದ ಕಡತದಲ್ಲಿ ತೆಗೆದುಕೊಳ್ಳಲಾಗಿದೆ.

3. 2,3 ಮತ್ತು 4ನೇ ಪ್ರತಿವಾದಿಗಳು 1ನೇ ಪ್ರತಿವಾದಿಯ ಕುಟುಂಬದ ಸದಸ್ಯರಾಗಿರುತ್ತಾರೆ. ಹಾಗೂ 1ನೇ ಪ್ರತಿವಾದಿಯವರು ವಾದಿ ಬ್ಯಾಂಕಿನಿಂದ ಪಡೆದಿರುವ ಸಾಲಕ್ಕೆ ಷೆಡ್ಯೂಲಿನಲ್ಲಿ ನಮೂದಿಸಿರುವ ಸ್ಥಿರಾಸ್ತಿ ಬಗ್ಗೆ ಮೆಮೋರೆಂಡಂ ಆಫ್ ಡಿಪಾಸಿಟ್ ಆಫ್ ಟೈಟಲ್ ಡೀಡ್ಸ್‌ಗಳನ್ನು ವಾದಿ ಬ್ಯಾಂಕ್ ಪರವಾಗಿ ದಾವಣಗೆರೆ ಉಪ ನೋಂದಣಾಧಿಕಾರಿಯವರ ಕಛೇರಿಯಲ್ಲಿ ನೋಂದಣಿ ಸಂಖ್ಯೆ 8941/2000-2001 ರಲ್ಲಿ ದಿನಾಂಕ 2.2.2001ರಂದು ನೋಂದಾಯಿಸಿ ಕೊಟ್ಟಿರುತ್ತಾರೆ. 5 ಮತ್ತು 6ನೇ ಪ್ರತಿವಾದಿಗಳು 1ನೇ ಪ್ರತಿವಾದಿಯ ಸಾಲಕ್ಕೆ ಜಾಮೀನುದಾರರಾಗಿರುತ್ತಾರೆ.

4. ವಾದಿಯು ಈ ದಾವಾ ಅರ್ಜಿಯೊಂದಿಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ಅರ್ಜಿಯಮನ್ನು ಸಲ್ಲಿಸಿ 2,3 ಮತ್ತು 4ನೇ ಪ್ರತಿವಾದಿಗಳು ವಾದಿ ಬ್ಯಾಂಕಿನ ಪರ ಷೆಡ್ಯೂಲಿನಲ್ಲಿ ನಮೂದಿಸಿರುವ ಸ್ಥಿರಾಸ್ತಿಗಳನ್ನು ಮೆಮೋರೆಂಡಂ ಆಫ್ ಡೆಪಾಸಿಟ್ ಆಫ್ ಟೈಟಲ್ ಡೀಡ್ಸ್ ಮೂಲಕ ನೋಂದಣಿ ಮಾಡಿಕೊಟ್ಟಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪು ಪೂರ್ವ ಜಪ್ತಿ ಆದೇಶ (Attachment Before Judgement) ವನ್ನು ನೀಡುವಂತೆ ಕೋರಿರುತ್ತಾರೆ.

5. 2, 3 ಮತ್ತು 4ನೇ ಪ್ರತಿವಾದಿಗಳು ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಸದರಿಯವರು ವಾದಿ ಬ್ಯಾಂಕಿಗೆ ವಂಚನೆ ಮಾಡುವ ದುರುದ್ದೇಶದಿಂದ ಮಾರಾಟ ಮಾಡಲು / ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದಿದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ತೀರ್ಪು / ಡಿಕ್ರಿ ನೀಡಿದ್ದರೂ ಸದರಿ ತೀರ್ಪು / ಡಿಕ್ರಿ ಅನ್ವಯ ಪ್ರತಿವಾದಿಗಳಿಂದ ವಾದಿ ಬ್ಯಾಂಕಿಗೆ ಬರಬೇಕಾದ ಮೊಬಲಗನ್ನು ವಸೂಲು ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ವಾದಿಯವರು ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ. 1ನೇ ಪ್ರತಿವಾದಿಯ ಸಂಸ್ಥೆ ಪ್ರಸ್ತುತ ಸ್ಥಗಿತಗೊಂಡಿದ್ದು, ವಾದಿ ಬ್ಯಾಂಕಿನ ಸಾಲ ವಸೂಲು ಮಾಡಲು ಕಷ್ಟಕರವೆಂದು ತಿಳಿಸಿರುತ್ತಾರೆ.

6. ವಾದಿಯ ದಾವಾ ಅರ್ಜಿ ಮತ್ತು ಅಫಿಡೇವಿಟ್‌ಯೊಂದಿಗೆ ದಾಖಲಿಸಿರುವ ಕಲಂ 103ರ ಅರ್ಜಿ ಮತ್ತು ದಾಖಲಾತಿಗಳನ್ನು ಕೂಲಂಕುಶವಾಗಿ ಪರಿಶೀಲಿಸಿದ್ದು ಈ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಅಲ್ಲದೆ 2, 3 ಮತ್ತು 4ನೇ ಪ್ರತಿವಾದಿಗಳ ಷೆಡ್ಯೂಲಿನಲ್ಲಿ ನಮೂದಿಸಿರುವ ಸ್ವತ್ತನ್ನು ಮಾರಾಟ ಮಾಡದಂತೆ ಹಾಗೂ ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ ಈ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪು / ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

7. ಮೇಲೆ ವಿವರಿಸಿರುವ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮತ್ತು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮ ಸಂಖ್ಯೆ ಸಿಎಂಡಬ್ಲ್ಯೂ 191 ಸಿಎಲ್‌ಎಂ 2004 (ಭಾಗ-1) ದಿನಾಂಕ 2.2.2005 ರನ್ವಯ ದತ್ತವಾಗಿರುವ ಅಧಿಕಾರವನ್ನು

ಚಲಾಯಿಸುತ್ತಾ ಆರ್.ಎಂ. ನಟರಾಜ್ ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ ನ್ಯಾಯಾಲಯ, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಆದ ನಾನು 2, 3 ಮತ್ತು 4ನೇ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರ ಆಸ್ತಿಯನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

2, 3 ಮತ್ತು 4ನೇ ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.32,54,459.00 (ಮೂವತ್ತೆರಡು ಲಕ್ಷದ ಐವತ್ನಾಲ್ಕು ಸಾವಿರದ ನಾಲ್ಕುನೂರಾ ಐವತ್ತೊಂಬತ್ತುಗಳು ಮಾತ್ರ) ಗಳನ್ನು ವ್ಯಾಜ್ಯ ದಿನಾಂಕದಿಂದ ಸಾಲ ಪೂರ್ತಿ ಪಾವತಿಯಾಗುವ ದಿನಾಂಕದವರೆಗೆ ಶೇಕಡಾ 16ರ ದರದಂತೆ ಆಗುವ ಬಡ್ಡಿ ಹಾಗೂ ಇತರೆ ಖರ್ಚಿನೊಂದಿಗೆ ವಾದಿಯ ಬ್ಯಾಂಕಿನಲ್ಲಿ ಅಮಾನತ್ತು ಖಾತೆಗೆ ದಿನಾಂಕ: 20.4.2005ರ ಒಳಗಾಗಿ ಜಮಾಮಾಡಿ, ಹೀಗೆ ಜಮಾಮಾಡಿದ ಅಧಿಕೃತ ಚಲನ್ / ರಸೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ, 2, 3 ಮತ್ತು 4ನೇ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗಿನ ಷೆಡ್ಯೂಲಿನಲ್ಲಿ ನಮೂದಿಸಿರುವ ಸ್ಥಿರ ಆಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಗಳು ಈ ತೀರ್ಪು ಪೂರ್ವ ಜಪ್ತಿ ಆದೇಶಕ್ಕೆ ಒಳಪಡುತ್ತವೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ ಸ್ಥಿರಾಸ್ತಿಯ ವಿವರ**

ದಾವಣಗೆರೆಯ ಬಿ.ಟಿ. ಗಲ್ಲಿ, 6ನೇ ಡಿವಿಜನ್ 4ನೇ ವಾರ್ಡಿನಲ್ಲಿ ಇರತಕ್ಕಂತ ಮನೆ ಸಂಖ್ಯೆ: 534/1 ಮತ್ತು 534/2 ಚಾಲ್ತಿ ಮನೆ ಸಂಖ್ಯೆ 534/1 ರಿಂದ 5, ಅಳತೆ 18 120 ಅಡಿಯುಳ್ಳ ಆರ್.ಸಿ.ಸಿ. ಛಾವಣಿಯುಳ್ಳ ವಾಣಿಜ್ಯ ಕಟ್ಟಡದ ನೆಲ ಮತ್ತು ಮೊದಲನೇ ಮಹಡಿಯ ಪೂರ್ಣ ಸ್ವತ್ತು. ಈ ಸ್ವತ್ತಿನ ಚಕ್ಕುಬಂದಿ:

ಪೂರ್ವಕ್ಕೆ : ಇ.ಜೆ. ಕುಮಾರ್ ಅವರ ಮನೆ
ಪಶ್ಚಿಮಕ್ಕೆ : ಆಮಿ ಚಂದ್‌ರವರ ಮನೆ
ಉತ್ತರಕ್ಕೆ : ಉತ್ತರಕ್ಕೆ ಬಿ.ಟಿ. ಗಲ್ಲಿ
ದಕ್ಷಿಣಕ್ಕೆ : ಕನ್ಸರ್ವೆನ್ಸಿ

ಈ ಆದೇಶವನ್ನು ನನ್ನ ಸ್ವ ಸಹಿ ಹಾಗೂ ನ್ಯಾಯಾಲಯದ ಮುದ್ರೆಯೊಂದಿಗೆ ದಿನಾಂಕ:18.3.2005 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ ನ್ಯಾಯಾಲಯ,
ಪಿ.ಆರ್. 548 ಕ.ರಾ.ಸ.ಪ.ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು.

**UNIVERSITY OF AGRICULTURAL SCIENCES, DHARWAD**
**Office of the Registrar Yattinagudda Campus, Krishinagar, Dharwad 580 005**
**NOTIFICATION No: R/B-91/-----2005, Dated: 15th March 2005**

**Sub:** Amendment to Statute 68 and 69 of U.A.S. Dharwad.

**Ref:** 1. Resolution at 91$^{st}$ meeting of the Board of Regents, UAS, Dharwad, held on 2.8.2002.
2. Govt Letter No. AHD 116 AUM 2002, dtd: 15.03.2005.

In exercise of the powers conferred under Section 40(6) of UAS Act 1963, His Excellency, the Chancellor is pleased to accord approval for the amendment to Statute 68 & 69 of University of Agricultural Sciences, Dharwad, as communicated by the Government vide above reference, as follows:-

| Statute | Existing | Approved |
|---|---|---|
| 68 | All employees who are in service of the University on the date of introduction of the amendment and are governed by the University Contributory Provident Fund Scheme shall exercise an option within 90 days in writing to continue under the scheme. Option once exercised is final and irrevocable. In the absence of such option, the employees will be deemed to have come over to the University pension scheme and subscription of such employee will be deemed to have come over to the University Pension Scheme and subscription of such employee towards the University Contributory Provident Fund with accrued interest will be transferred to the General Provident Fund account with University and the University contribution with accrued interest will be credited to the pension Fund. They should continue to subscribe at 10 percent of their basic pay to the General Provident Fund. | Deleted w.e.f. the Date of Notification. |
| 69 | Employees who are in service and who do not opt to continue under University Contributory Provident Fund Scheme and persons appointed under the Statute on or after the date of introduction of this amendment shall be governed by the University Pension Scheme. They should necessarily contribute 10 per cent of their basic pay to the General Provident Fund. | All employees shall be covered by the University Pension Scheme w.e.f. the date of Notification of this Statute. They should necessarily contribute 10 percent of their basic pay to General Provident Fund. |

They shall come into effect from the date of Gazette Notification.

By Order,
**K.A. KULKARNI**
Registrar

P.D. 23

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು, ಇವರ ನ್ಯಾಯಾಲಯದಲ್ಲಿ**

**ಡಿ.ಟಿ.ಸಿ.ಆರ್. ಸಂಖ್ಯೆ: 359/2003-04, ದಿನಾಂಕ: 24ನೇ ಮಾರ್ಚ್ 2005**

**ಬಸವನಹಳ್ಳಿ ಪೊಲೀಸ್ ಠಾಣೆ ಚಿಕ್ಕಮಗಳೂರು ಕ್ರೈಂ ಸಂಖ್ಯೆ. 06/2004 ದಿನಾಂಕ: 26ನೇ ಜನವರಿ 2004**

**ಅಬಕಾರಿ ಉಪ ನಿರೀಕ್ಷಕರು, ಚಿಕ್ಕಮಗಳೂರು ಉಪ ವಲಯ ಇವರ ಪ್ರ ವ ವ ಸಂಖ್ಯೆ.49/2003-04 ದಿನಾಂಕ: 18ನೇ ಜೂನ್ 2004**

**ಉಪಸ್ಥಿತರು**

ಶ್ರೀ ಎಸ್.ಎಲ್. ರಾಜೇಂದ್ರ ಪ್ರಸಾದ್

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

| **ಫಿರ್ಯಾದುದಾರರು** | **ಆಪಾದಿತರು** |
|---|---|
| ಆರಕ್ಷಕ ಉಪ ನಿರೀಕ್ಷಕರು | ಆರ್.ಸಿ. ಶಂಕರೇಗೌಡ ಬಿನ್ ಚಿಕ್ಕೇಗೌಡ |
| ಚಿಕ್ಕಮಗಳೂರು ಬಸವನಹಳ್ಳಿ ಪೊಲೀಸ್ ಠಾಣೆ | ಮತ್ತು ಇತರರು |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:26.01.2004 ರಂದು ಆರಕ್ಷಕ ಉಪ ನಿರೀಕ್ಷಕರು, ಚಿಕ್ಕಮಗಳೂರು ಬಸವನಹಳ್ಳಿ ಪೊಲೀಸ್ ಠಾಣೆ, ಇವರು ಸಿಬ್ಬಂದಿಗಳು ಮತ್ತು ಮೇಲಾಧಿಕಾರಿಗಳೊಂದಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಚಿಕ್ಕಮಗಳೂರು ನಗರದ ಗೌರಿ ಕಾಲುವೆಯ ಚರ್ಚ್ ರಸ್ತೆಯಲ್ಲಿರುವ, ಪುಟ್ಟ ಸ್ವಾಮಿ ಗೌಡರ ಮನೆಯಲ್ಲಿ ಬಾಡಿಗೆಗೆ ಇರುವ ಶ್ರೀಮತಿ ಪ್ರೇಮ ಕೋಂ ಲೇಟ್ ಕೃಷ್ಣಮೂರ್ತಿ ಇವರ ಮನೆಯಲ್ಲಿ ದಾಳಿ ನಡೆಸಿದಾಗ ಶ್ರೀ ಆರ್.ಸಿ. ಶಂಕರೇಗೌಡ ಬಿನ್ ಚಿಕ್ಕೇಗೌಡ, ಸಿ.ಎಲ್. ಯೋಗರಾಜು ಬಿನ್ ಲಕ್ಕೇಗೌಡ ಮತ್ತು ಸಿ.ವಿ. ಆನಂದ ಬಿನ್ ವೇಲಾಯುಧನ್ ಇವರುಗಳನ್ನು ಹಿಡಿದು ಪರಿಶೀಲಿಸಿದಾಗ ನಕಲಿ ಮದ್ಯ ತಯಾರಿಸುತ್ತಿದ್ದು, ಒಟ್ಟು 8 ರಟ್ಟಿನ ಪೆಟ್ಟಿಗೆಗಳಲ್ಲಿ ವಿವಿಧ ಬಗೆಯ ನಕಲಿ ಮದ್ಯ 66.780 ಲೀಟರ್ ಹಾಗೂ ನಕಲಿ ಮದ್ಯ ತಯಾರಿಸುವ ಸಾಮಗ್ರಿಗಳೊಂದಿಗೆ ಒಂದು ಬಜಾಜ್ ಸ್ಕೂಟರ್ ವಾಹನ ಸಂಖ್ಯೆ. ಸಿ.ಟಿ.ಎಕ್ಸ್. 943 ಅನ್ನು ಮತ್ತು ನಗದು ಹಣ ರೂ.1,250/- ಗಳನ್ನು ವಶಪಡಿಸಿಕೊಂಡು, ಸದರಿ ಆರೋಪಿಗಳು ಯಾವುದೇ ಪರವಾನಗಿ ಇಲ್ಲದೇ ನಕಲಿ ಮದ್ಯವನ್ನು ತಯಾರಿಸಿ ಬಾಟಲುಗಳನ್ನು ತುಂಬಿಸಿ, ನಕಲಿ ಲೇಬಲ್‌ಗಳನ್ನು ಸೃಷ್ಟಿಸಿ ಬಾಟಲಿಗಳ ಮೇಲೆ ಅಂಟಿಸಿ ಮಾರಾಟ ಮಾಡಿ ಮೋಸ ಮಾಡುತ್ತಿದ್ದರಿಂದ, ಸದರಿಯವರ ವಿರುದ್ಧ ಕ್ರಮ ಕೈಗೊಂಡು ಠಾಣೆಯ ಕ್ರೈಂ ಸಂಖ್ಯೆ:06/2004ರಲ್ಲಿ ಮೊಕದ್ದಮೆಯನ್ನು ದಾಖಲು ಮಾಡಿ ನ್ಯಾಯಾಲಯಕ್ಕೆ ನಿವೇದಿಸಿಕೊಳ್ಳಲಾಯಿತು. ನಂತರ ಸದರಿ ಮಾಲುಗಳನ್ನು ಠಾಣೆಯ ಪಿ.ಎಫ್. ನಂ.09/2004ರಲ್ಲಿ ನಮೂದಿಸಲಾಯಿತು. ಸದರಿ ಆರೋಪಿಗಳನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿ 1ನೇ ಆರೋಪಿಯನ್ನು ಪೊಲೀಸ್‌ರವರ ವಶಕ್ಕೆ ತೆಗೆದುಕೊಂಡು ಈತನನ್ನು ಶಿವಮೊಗ್ಗಕ್ಕೆ ಕರೆದುಕೊಂಡು ಹೋಗಿ ಅಲ್ಲಿನ ಆರೋಪಿಗಳಾದ ರಾಜು, ರಹಮಾತುಲ್ಲಾ ಮತ್ತು ಗೋವಿಂದರಾಜು ಇವರುಗಳನ್ನು ದಸ್ತಗಿರಿ ಮಾಡಿ, ಇವರುಗಳಿಂದ ವಾಹನ ಸಂಖ್ಯೆ. ಕೆ ಎ 14 ಕ್ಯೂ. 050 ಮತ್ತು ಕೆ.ಎ14 ಕ್ಯೂ. 2070 ಸುಜುಕಿ ಮೋಟಾರ್ ಬೈಕ್‌ಗಳು, 2 ಮೊಬೈಲ್ ಫೋನ್‌ಗಳು, ಮದ್ಯದ ಲೇಬಲ್‌ಗಳು, ಖಾಲಿ ಸಾರಾಯಿ ಪ್ಯಾಕೇಟ್‌ಗಳಿರುವ 2 ಕಟ್ಟುಗಳು, 100 ಮಿಲಿಯ 18 ಸಾರಾಯಿ ಪ್ಯಾಕೇಟ್‌ಗಳು ಮತ್ತು ಸಾರಾಯಿ ಪ್ಯಾಕೇಟ್‌ಗಳನ್ನು ಪಂಚ್ ಮಾಡುವ ಒಂದು ಪಂಚಿಂಗ್ ಮಿಷಿನ್ ಅನ್ನು ವಶಪಡಿಸಿಕೊಂಡು ಠಾಣೆಗೆ ಬಂದು ಪಿ ಎಫ್.ನಂ.10,11/2004 ರಲ್ಲಿ ನಮೂದಿಸಿದ್ದು ಮತ್ತು ಚಿಕ್ಕಮಗಳೂರಿನ ವಲ್ಲಭ ಗಣಪತಿ ದೇವಾಲಯದ ಹತ್ತಿರ 1ನೇ ಆರೋಪಿಯು ತೋರಿಸಿದ ಒಂದು ಮಾರುತಿ ಸಂಖ್ಯೆ. ಕೆ.ಎ. 25 ಎಂ. 11 ಹಾಗೂ ಕಾರ್‌ನಲ್ಲಿದ್ದ ಬಿಳಿ ಪ್ಲಾಸ್ಟಿಕ್ ಕ್ಯಾನಿನಲ್ಲಿ 5 ಲೀಟರ್ ಸ್ಪಿರೀಟ್ ಮತ್ತು ಇನ್ನಿತರೆ ವಸ್ತುಗಳನ್ನು ವಶಪಡಿಸಿಕೊಂಡು ಪಿ.ಎಫ್.ನಂ.12/2004 ರಲ್ಲಿ ನಮೂದಿಸಿದ್ದು, ನಗದು ಹಣ, ವಾಹನಗಳು ಮತ್ತು ಸಾರಾಯಿ ಪ್ಯಾಕೇಟ್ ಸೀಲು ಮಾಡುವ ಪಂಚಿಂಗ್ ಮಿಷಿನ್ ಹೊರತುಪಡಿಸಿ ಇನ್ನುಳಿದ ವಸ್ತುಗಳಲ್ಲಿ ಪ್ರತ್ಯೇಕವಾಗಿ ರಾಸಾಯನಿಕ ಪರೀಕ್ಷೆಗಾಗಿ ಮಾದರಿಗಳನ್ನು ತೆಗೆದು ಸಂಬಂಧಪಟ್ಟ ಕಡತದೊಂದಿಗೆ ಮುಂದಿನ ಕ್ರಮಕ್ಕಾಗಿ ಅಬಕಾರಿ ಉಪ ನಿರೀಕ್ಷಕರು, ಚಿಕ್ಕಮಗಳೂರು ಉಪ ವಲಯ ಇವರಿಗೆ ಹಸ್ತಾಂತರಿಸಿದ ಮೇರೆಗೆ, ಸದರಿಯವರು ತನಿಖೆ ಮುಂದುವರೆಸಿ ಪ್ರ.ವ.ವ. ಸಂಖ್ಯೆ.49/2003-04, ದಿನಾಂಕ: 18.6.2004ರಲ್ಲಿ ಮೊಕದ್ದಮೆಯನ್ನು ದಾಖಲಿಸಿ ನ್ಯಾಯಾಲಯಕ್ಕೆ ಮತ್ತು ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ವಶಪಡಿಸಿಕೊಂಡ ವಾಹನಗಳು ಹಾಗೂ ನಕಲಿ ಮದ್ಯ ಮತ್ತು ಇನ್ನಿತರೆ ವಸ್ತುಗಳಿಗೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡುವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ. 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕೋರಿ ಪತ್ರ ಬರೆದು ಕ್ರಮ ಕೈಗೊಳ್ಳಲಾಯಿತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಇವರಿಂದ ಪಡೆಯಲಾದ ವಾಹನ ಸಂಖ್ಯೆ. ಕೆ.ಎ. 25 ಎಂ.11 ಸಂಬಂಧಿಸಿದಂತೆ ವಾಹನದ "ಬಿ" ಎಕ್ಸ್ಟ್ರಾಕ್ಟ್ ಆಧಾರದ ಮೇಲೆ ವಾಹನದ ಮಾಲೀಕರಾದ ಶ್ರೀ ಆರ್.ಸಿ. ಶಂಕರೇಗೌಡ ಬಿನ್ ಚಿಕ್ಕೇಗೌಡ, ರಾಮನಹಳ್ಳಿ, ಚಿಕ್ಕಮಗಳೂರು, ಇವರು ವಾಹನದ ಮಾಲೀಕರೆಂದು ತಿಳಿದು ಬಂದಿರುತ್ತದೆ. ಹಾಗೂ ಮೋಟಾರ್ ವಾಹನ ನಿರೀಕ್ಷಕರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿ, ಚಿಕ್ಕಮಗಳೂರು ಇವರು ವಾಹನ ಸಂಖ್ಯೆ. ಸಿ ಟಿ ಎಕ್ಸ್ 943 ಬಜಾಜ್ ಸ್ಕೂಟರ್‌ಗೆ ರೂ.4,000 (ನಾಲ್ಕು ಸಾವಿರ ರೂಪಾಯಿಗಳು ಮಾತ್ರ)ಗಳು, ಕೆ.ಎ.14 ಕ್ಯೂ. 050 ಸುಜಿಕಿ ಮೋಟಾರ್ ಬೈಕ್‌ಗೆ ರೂ.15,000/- (ಹದಿನೈದು ಸಾವಿರ ರೂಪಾಯಿಗಳು ಮಾತ್ರ)ಗಳು, ಕೆಎ.14 ಕ್ಯೂ. 2070 ಸುಜಿಕಿ ಮೋಟಾರ್ ಬೈಕ್‌ಗೆ ರೂ.15,000/- (ಹದಿನೈದು ಸಾವಿರ ರೂಪಾಯಿಗಳು ಮಾತ್ರ)ಗಳು ಮತ್ತು ಕೆಎ. 25 ಎಂ.11 ಮಾರುತಿ ಕಾರ್‌ಗೆ ರೂ.25,000/- (ಇಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ)ಗಳು ಬೆಲೆಯನ್ನು ನಿಗದಿಪಡಿಸಿ ವರದಿಯನ್ನು ನೀಡಿರುತ್ತಾರೆ.

ವಾಹನ ಸಂಖ್ಯೆ.ಕೆ.ಎ. 25 ಎಂ.11 ಮಾರುತಿ ಕಾರ್‌ಗೆ ಸಂಬಂಧಿಸಿದಂತೆ ಮಾರುತಿ ಕಾರ್ ವಾಹನದ ಮಾಲೀಕರಾದ ಶ್ರೀ ಆರ್.ಸಿ. ಶಂಕರೇಗೌಡ ಬಿನ್ ಚಿಕ್ಕೇಗೌಡ, ರಾಮನಹಳ್ಳಿ, ಚಿಕ್ಕಮಗಳೂರು ಇವರಿಗೆ ಕಲಂ. 43(ಬಿ) ಅಡಿಯಲ್ಲಿ ನೋಟೀಸ್ ಅನ್ನು ನೊಂದಾಯಿತ ಅಂಚೆ ಮೂಲಕ ರವಾನಿಸಲು ಕ್ರಮ ಕೊಂಡಿದ್ದು, ದಿನಾಂಕ: 11.2.2005ರಂದು "ರಿಟರ್ನ್ಡ್ ಟು ಸೆಂಡರ್" ಎಂಬ ಷರಾದೊಂದಿಗೆ ಈ ಪ್ರಾಧಿಕಾರಕ್ಕೆ ವಾಪಸ್ಸು ಬಂದಿರುತ್ತದೆ.

ಸದರಿ ವಾಹನ ಮಾಲೀಕರಿಗೆ ಮತ್ತೊಮ್ಮೆ ನೋಟೀಸ್‌ನ್ನು ಅಬಕಾರಿ ಉಪ ನಿರೀಕ್ಷಕರು, ಚಿಕ್ಕಮಗಳೂರು ಉಪ ವಲಯ ಇವರಿಗೆ ಜಾರಿಗೊಳಿಸಲು ನೀಡಿದ್ದು, ಸದರಿಯವರು ವಾಹನ ಮಾಲೀಕರಿಗೆ ನೋಟೀಸ್‌ನ್ನು ದಿನಾಂಕ:16.2.2005 ರಂದು ಖುದ್ದಾಗಿ ಜಾರಿಗೊಳಿಸಿ ಸ್ವೀಕೃತಿ ಪಡೆದು ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ. ಕೆಎ 25 ಎಂ.11 ಮಾರುತಿ ಕಾರ್‌ಗೆ ಸಂಬಂಧಿಸಿದಂತೆ ಮಾರುತಿ ಕಾರ್ ವಾಹನದ ಮಾಲೀಕರಿಗೆ ನೋಟೀಸ್ ಜಾರಿಯಾಗಿದ್ದರೂ ಸಹಾ ಈವರೆವಿಗೂ ಪ್ರಾಧಿಕಾರದ ಮುಂದೆ ಬಂದು ಹಕ್ಕು ಸಾಧಿಸಿರುವುದಿಲ್ಲ. ಈ ಬಗ್ಗೆ ವಾಹನದ ಮಾಲೀಕರಿಗೆ ವಾಹನದ ಮೇಲೆ ಆಸಕ್ತಿ ಇಲ್ಲವೆಂದು ಪರಿಗಣಿಸಲಾಗಿರುತ್ತದೆ. ವಶಪಡಿಸಿಕೊಂಡ ಮಾರುತಿ ಕಾರಿನ ನಡವಳಿಗಳು

ಪೂರ್ಣಗೊಂಡಿರುತ್ತದೆ. ಹಾಗೂ ವಶಪಡಿಸಿಕೊಂಡ 2 ನೊಕಿಯ್ಯ ಕಂಪನಿಯ ಮೊಬೈಲ್ ಫೋನ್‌ಗಳ ಮಾಲೀಕರ ಪತ್ತೆ ಕುರಿತು ಆಧಾರ ಸಿಗದ ಕಾರಣ ಸದರಿ 2 ಮೊಬೈಲ್ ಫೋನ್‌ಗಳನ್ನು ಹಾಗೂ ವಶಪಡಿಸಿಕೊಂಡ ನಗದು ಹಣ ರೂ.1,250/-(ಒಂದು ಸಾವಿರ ಎರಡು ಐವತ್ತು ನೂರ ರೂಪಾಯಿಗಳು ಮಾತ್ರ)ಗಳು, ತಮ್ಮದೆಂದು ಈ ಪ್ರಾಧಿಕಾರದ ಮುಂದೆ ಯಾರು ಬಂದು ಹಕ್ಕು ಸಾಧಿಸಿರುವುದಿಲ್ಲ. ಸದರಿ ನಗದು ಹಣವನ್ನು ಮತ್ತು ಜಪ್ತಾಗಿರುವ ಮಾರುತಿ ಕಾರ್ ವಾಹನವು ಇಲಾಖೆಯ ವಶದಲ್ಲಿದ್ದು, ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಸರ್ಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಮೊಕದ್ದಮೆಯ ಶೀಘ್ರ ವಿಲೇವಾರಿಯ ದೃಷ್ಟಿ, ಸರ್ಕಾರದ ಆದಾಯದ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ ಕಲಂ. 43 (ಸಿ) ಅಡಿಯಲ್ಲಿ ಮಾರುತಿ ಕಾರ್ ವಾಹನವನ್ನು 2 ನೊಕಿಯ್ಯ ಕಂಪನಿಯ ಮೊಬೈಲ್ ಫೋನ್‌ಗಳು ಮತ್ತು ನಗದು ಹಣ ರೂ.1,250/-ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಶ್ರೀ ಎಸ್.ಎಲ್. ರಾಜೇಂದ್ರ ಪ್ರಸಾದ್, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು, ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ. 43 (ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ.43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನಗಳು, ಮೊಬೈಲ್ ಫೋನ್‌ಗಳು, ನಗದು ಹಣ ಮತ್ತು ಇತರೆ ವಸ್ತುಗಳ ಪೈಕಿ ವಾಹನ ಸಂಖ್ಯೆ. ಕೆಎ. 25 ಎಂ.11 (ಮಾರುತಿ ಕಾರ್) ವಾಹನವನ್ನು, 2 ನೊಕಿಯ್ಯ ಕಂಪನಿಯ ಮೊಬೈಲ್ ಫೋನ್‌ಗಳು ಹಾಗೂ ನಗದು ಹಣ ರೂ.1,250/- (ಒಂದು ಸಾವಿರ ಎರಡು ನೂರ ಐವತ್ತು ರೂಪಾಯಿಗಳು ಮಾತ್ರ) ಇವುಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ. 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ. ಇನ್ನೂ ಉಳಿದ ವಾಹನಗಳ ಪೈಕಿ ವಾಹನ ಸಂಖ್ಯೆ. ಸಿಟಿಎಕ್ಸ್ 943 (ಬಜಾಜ್ ಸ್ಕೂಟರ್) ವಾಹನವನ್ನು ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಿದೆ. ಇನ್ನೂ ಉಳಿದ ವಾಹನಗಳ ವಾಹನ ಸಂಖ್ಯೆ. ಕೆಎ.14 ಕ್ಯೂ 050 (ಸುಜಿಕಿ ಮೋಟಾರ್ ಬೈಕ್), ಕೆಎ.14 ಕ್ಯೂ 2070 (ಸುಜಿಕಿ ಮೋಟಾರ್ ಬೈಕ್) ಮತ್ತು ಇತರೆ ವಸ್ತುಗಳಿಗೆ ಸಂಬಂಧಿಸಿದಂತೆ ಸರ್ಕಾರಕ್ಕೆ ಮುಟ್ಟುಗೋಲಿನ ನಡವಳಿಗಳನ್ನು ಮುಂದುವರೆದಿದೆ.

ಈ ಆದೇಶವನ್ನು ಇಂದು ಅಂದರೆ 24ನೇ ಮಾರ್ಚ್ 2005 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಕಂಪ್ಯೂಟರ್‌ನಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಪಿ.ಆರ್. 563 ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು, ಇವರ ನ್ಯಾಯಾಲಯದಲ್ಲಿ**

**ಡಿ.ಟಿ.ಸಿ.ಆರ್. ಸಂಖ್ಯೆ: 772/2002-03, ದಿನಾಂಕ: 3ನೇ ಮಾರ್ಚ್ 2005**

**ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ ಕ್ರೈಂ ಸಂಖ್ಯೆ. 30/2003 ದಿನಾಂಕ: 21ನೇ ಫೆಬ್ರವರಿ 2003**

**ಅಬಕಾರಿ ಉಪ ನಿರೀಕ್ಷಕರು, ಚಿಕ್ಕಮಗಳೂರು ಉಪ ವಲಯ ಇವರ ಪ್ರ ವ ವ ಸಂಖ್ಯೆ.44/2002-03 ದಿನಾಂಕ: 27ನೇ ಫೆಬ್ರವರಿ 2002**

**ಉಪಸ್ಥಿತರು**

ಶ್ರೀ ಎಸ್.ಎಲ್. ರಾಜೇಂದ್ರ ಪ್ರಸಾದ್

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

| **ಫಿರ್ಯಾದುದಾರರು** | **ಆಪಾದಿತರು** |
|---|---|
| ಆರಕ್ಷಕ ಉಪ ನಿರೀಕ್ಷಕರು | ಶಿವ ಬಿನ್ ತಿಮ್ಮಪ್ಪ ಮತ್ತು ಇತರರು |
| ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ | |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:21.02.2003 ರಂದು ಆರಕ್ಷಕ ಉಪ ನಿರೀಕ್ಷಕರು, ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ, ಚಿಕ್ಕಮಗಳೂರು ಇವರು ಸಿಬ್ಬಂದಿಯೊಂದಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಚಿಕ್ಕಮಗಳೂರು ನಗರದ ಬೇಲೂರು ರಸ್ತೆ, ಹಿರೇಮಗಳೂರು ಹತ್ತಿರದ ಅಂಬಳೆ ಕ್ರಾಸ್‌ನಲ್ಲಿ, ಗಸ್ತು ಕಾರ್ಯ ನಿರ್ವಹಿಸುವಾಗ ಲಾರಿ ಸಂಖ್ಯೆ: ಎಂ.ಇ. ಜೆಡ್ 8359ಅನ್ನು ಅಕ್ರಮ ಮದ್ಯ ಸಾಗಾಣಿಕೆ ಸಂಬಂಧದಲ್ಲಿ ಅನುಮಾನಗೊಂಡು ತಡೆದು ನಿಲ್ಲಿಸಿ ತಪಾಸಣೆ ಮಾಡಲಾಗಿ ವಾಹನದಲ್ಲಿ ಒಟ್ಟು 4087.440 ಲೀಟರ್ ದೇಶಿಯ ಮದ್ಯವಿದ್ದು, ಸದರಿ ಮದ್ಯ ಸಾಗಾಣಿಕೆಗೆ ಸಂಬಂಧಿಸಿದಂತೆ ವಾಹನದಲ್ಲಿದ್ದ ವ್ಯಕ್ತಿಗಳಾದ ಶಿವ ಬಿನ್ ತಿಮ್ಮಪ್ಪ ಮತ್ತು ರಾಜು ಬಿನ್ ಶಿವ ಇವರುಗಳು ಅಧಿಕೃತ ರಹದಾರಿ ಪತ್ರಗಳನ್ನಾಗಲೀ ಅಥವಾ ಸಾಗಾಣಿಕೆಗೆ ಸಂಬಂಧಪಟ್ಟ ದಾಖಲಾತಿಗಳನ್ನು ಹಾಜರುಪಡಿಸದೇ ಇದ್ದುದರಿಂದ, ತೆರಿಗೆ ರಹಿತವಾದುದೆಂದು ದೃಢಪಡಿಸಿಕೊಂಡು ಈ ಬಗ್ಗೆ ಸ್ಥಳದಲ್ಲಿ ಪಂಚರ ಸಮಕ್ಷಮ ಜರುಗಿಸಬೇಕಾದ ಕ್ರಮಗಳನ್ನು ಅನುಸರಿಸಿ ದೊರೆತ ಮದ್ಯವನ್ನು ವಾಹನದೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಠಾಣೆಯ ಕ್ರೈಂ ಸಂಖ್ಯೆ.44/2003ರಲ್ಲಿ ಮೊಕದ್ದಮೆಯನ್ನು ದಾಖಲಿಸಿ, ಆರೋಪಿಗಳನ್ನು ದಸ್ತಗಿರಿಗೊಳಿಸಿ ಮುಂದಿನ ತನಿಖೆಗಾಗಿ ಅಬಕಾರಿ ಉಪ ನಿರೀಕ್ಷಕರು, ಚಿಕ್ಕಮಗಳೂರು ಉಪ ವಲಯ ಇವರಿಗೆ ಹಸ್ತಾಂತರಿಸಿದ ಮೇರೆಗೆ, ಸದರಿಯವರು ತನಿಖೆ ಮುಂದುವರೆಸಿ ಪ್ರ.ವ.ವ. ಸಂಖ್ಯೆ:59/2001-02, ದಿನಾಂಕ: 27.2.2002ರಲ್ಲಿ ಮೊಕದ್ದಮೆಯನ್ನು ದಾಖಲಿಸಿ ನ್ಯಾಯಾಲಯಕ್ಕೆ ಮತ್ತು ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ತೆರಿಗೆ ರಹಿತ ಭಾರತೀಯ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡುವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ. 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕೋರಿ ಪತ್ರ ಬರೆದು ಕ್ರಮ ಕೈಗೊಳ್ಳಲಾಯಿತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೋರಮಂಗಲ, ಬೆಂಗಳೂರು (ಕೇಂದ್ರ) ಇವರಿಂದ ಪಡೆಯಲಾದ ವಾಹನದ "ಬಿ" ಎಕ್ಸ್ಟ್ರ್ಯಾಕ್ಟ್ ಆಧಾರದ ಮೇಲೆ ವಾಹನದ ಮಾಲೀಕರಾದ ಶ್ರೀ ಡಿ. ಚಂದ್ರಶೇಖರ ಬಿನ್ ದೊರೆಸ್ವಾಮಿ, ನಂ.25, ಲಕ್ಷ್ಮೀ ರಸ್ತೆ, ಶಾಂತಿನಗರ, ಬೆಂಗಳೂರು, ಇವರು

ವಾಹನದ ಮಾಲೀಕರೆಂದು ತಿಳಿದು ಬಂದಿರುತ್ತದೆ. ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿ, ಚಿಕ್ಕಮಗಳೂರು ಇವರು ವಾಹನಕ್ಕೆ ರೂ.2,30,000 (ಎರಡು ಲಕ್ಷದ ಮೂವತ್ತು ಸಾವಿರ ರೂಪಾಯಿಗಳು ಮಾತ್ರ)ಗಳ ಬೆಲೆಯನ್ನು ನಿಗದಿಪಡಿಸಿ ವರದಿಯನ್ನು ನೀಡಿರುತ್ತಾರೆ.

ವಾಹನದ ಮಾಲೀಕರಾದ ಶ್ರೀ ಡಿ. ಚಂದ್ರಶೇಖರ ಬಿನ್ ದೊರೆಸ್ವಾಮಿ, ನಂ.25, ಲಕ್ಷ್ಮೀ ರಸ್ತೆ, ಶಾಂತಿನಗರ, ಬೆಂಗಳೂರು, ಇವರಿಗೆ ಕಲಂ.43(ಬಿ) ಅಡಿಯಲ್ಲಿ ನೋಟೀಸ್ ಅನ್ನು ನೊಂದಾಯಿತ ಅಂಚೆ ಮೂಲಕ ರವಾನಿಸಲು ಕ್ರಮಕೊಂಡಿದ್ದು, ದಿನಾಂಕ: 15.9.2004 ರಂದು ಷರಾದೊಂದಿಗೆ ಈ ಪ್ರಾಧಿಕಾರಕ್ಕೆ ವಾಪಸ್ಸು ಬಂದಿರುತ್ತದೆ.

ಅಲ್ಲದೇ ಸದರಿ ವಾಹನ ಮಾಲೀಕರಿಗೆ ಮತ್ತೊಮ್ಮೆ ನೋಟೀಸ್‌ನ್ನು ಅಬಕಾರಿ ಉಪ ನಿರೀಕ್ಷಕರು, ಚಿಕ್ಕಮಗಳೂರು ಉಪ ವಲಯ ಇವರಿಗೆ ಜಾರಿಗೊಳಿಸಲು ನೀಡಿದ್ದು, ಸದರಿಯವರು ವಾಹನ ಮಾಲೀಕರಿಗೆ ನೋಟಿಸ್ ಜಾರಿಗೊಳಿಸಲು ಸದರಿ ವಿಳಾಸಕ್ಕೆ ದಿನಾಂಕ:1.10.2004ರಂದು ಸದರಿ ವಿಳಾಸದಾರರ ಮನೆ ಹತ್ತಿರ ಹೋದಾಗ ಮನೆಯಲ್ಲಿ ವಾಹನದ ಮಾಲೀಕರು ಸ್ಥಳದಲ್ಲಿ ಇರುವುದಿಲ್ಲ. ಎಂದು ಕಂಡು ಬಂದಿರುತ್ತದೆ. ಹಾಗೂ ಈ ಮನೆಯಲ್ಲಿ ಶಶಿರಾಜ್ ಬಲ್ಲಾಳ್ ಎಂಬುವರು ವಾಸವಿರುತ್ತಾರೆ. ಎಂದು ಅಬಕಾರಿ ಉಪ ನಿರೀಕ್ಷಕರು, ಚಿಕ್ಕಮಗಳೂರು ಉಪ ವಲಯ ಇವರು ವರದಿ ಮಾಡಿರುತ್ತಾರೆ.

ಮೊಕದ್ದಮೆಯಲ್ಲಿ ವಶಪಡಿಸಿಕೊಂಡ 4087.440 ಲೀಟರ್ ಮದ್ಯದಲ್ಲಿ ರಾಸಾಯನಿಕ ಪರೀಕ್ಷೆಗೆ ತೆಗೆದುಳಿದ 4052.160 ಲೀಟರ್ ಮದ್ಯವನ್ನು ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿದ್ದು, ಮೊಕದ್ದಮೆಗೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ ಮೊಕದ್ದಮೆ ದಾಖಲಾಗಿ ಎರಡು ವರ್ಷ ಎರಡು ತಿಂಗಳಿಗೂ ಮೇಲ್ಪಟ್ಟಿದ್ದು, ವಾಹನದ ಮಾಲೀಕರಿಗೆ ನೋಟೀಸ್ ಜಾರಿಯಾಗದೇ ಮರಳಿ ಬಂದಿದ್ದು ಹಾಗೂ ಅಬಕಾರಿ ಉಪ ನಿರೀಕ್ಷಕರು, ಚಿಕ್ಕಮಗಳೂರು ಉಪವಿಭಾಗ ಚಿಕ್ಕಮಗಳೂರು ಇವರ ವರದಿಯನ್ವಯ ವಾಹನ ಮಾಲೀಕರು ವಿಳಾಸದಲ್ಲಿ ವಾಸವಿಲ್ಲದ ಕಾರಣ ಸಹಾ ಜಪ್ತಾಗಿರುವ ವಾಹನಕ್ಕೆ ಇದುವರೆವಿಗೂ ಪ್ರಾಧಿಕಾರದ ಮುಂದೆ ವಾಹನದ ಮಾಲೀಕರು ಬಂದು ಹಕ್ಕು ಸಾಧಿಸದೇ ಇರುವುದರಿಂದ ಸದರಿಯವರಿಗೆ ವಾಹನದ ಮೇಲೆ ಆಸಕ್ತಿ ಇಲ್ಲವೆಂದು ಪರಿಗಣಿಸಲಾಗಿರುತ್ತದೆ. ವಾಹನವು ಇಲಾಖೆಯ ವಶದಲ್ಲಿದ್ದು, ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಸರ್ಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಮೊಕದ್ದಮೆಯ ಶೀಘ್ರ ವಿಲೇವಾರಿಯ ದೃಷ್ಟಿ, ಸರ್ಕಾರದ ಆದಾಯದ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ ಕಲಂ.43(ಸಿ) ಅಡಿಯಲ್ಲಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಶ್ರೀ ಎಸ್.ಎಲ್. ರಾಜೇಂದ್ರ ಪ್ರಸಾದ್, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು, ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ. 43 (ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ.43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ. ಎಂಇಜೆಡ್ 8359 (ಲಾರಿ) ಅನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ. 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 03ನೇ ಮಾರ್ಚ್ 2005 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಕಂಪ್ಯೂಟರ್‌ನಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಪಿ.ಆರ್. 564 ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

**OFFICE OF THE COMMISSIONER, BANGALORE DEVELOPMENT AUTHORITY, BANGALORE**
**Notification Under Section 17(1) & (3) of BDA Act 1976**
**No. BDA/Commr/LAO/4023/2004-05, Bangalore, Dated: 24th March 2005**

Whereas it appears to the Bangalore Development Authority, that the lands specified in the Schedule hereto likely to be needed for the purpose I.e., for the "formation of Ring Road between Magadi Road and Mysore Road" in this regard development scheme has been proposed.

Notice to that effect is hereby given to all whom it may concern in accordance with the provisions of Sub-Section (1) & (3) of Section 17 of Bangalore Development Authority Act 1976 (Karnataka Act No. 12 of 1976).

In accordance with section 36 of BDA Act, the Land Acquisition Officer, Bangalore Development Authority, Bangalore, his staff and workmen are hereby authorised to exercise the Power conferred under Section 4(2) of Land Acquisition Act 1894. Any Person/s interested in the land may prefer his/her objections within 30 days from the date of Publication of this Notification to the Land Acquisition Officer, Bangalore Development Authority, T. Chowdaiah Road, Bangalore - 560 020.

All Persons interested in the said lands are hereby warned not to obstruct or interfere with any Surveyor or any persons employed upon to the said lands for the purpose of said Acquisition. Any contracts for the disposal of the said lands by Sale, Mortgage, Assinment, Exchange or otherwise or any out-lay or Improvements made there-in without sanction of the Deputy Commissioner (Land Acquisition), Bangalore Development Authority, Bangalore - 560 020, after the date of Publication of this Notification shall under Section 24 (Clause Seventy) of the Land Acquisition Act 1894, be di-43 garded by the officer assessing Compensation for such parts of the said lands as may be finally acquired.

The Particulars of the scheme, the Maps of the area comprised therein and the statement specifying the lands which it is proposed to be acquired may be seen in the Office of the Land Acquisition Officer, Bangalore Development Authority, Bangalore, during the office hours on all working days.

## SCHEDULE

District: **Bangalore** Taluk: **Bangalore South** Hobli: **1) Kengeri** **2) Yashavanthpura** Villages:- **1) Nayandahalli** **2) Malagala**

**NAYANDAHALLI**

| Sl. No. | Name of the Kathedars/ Anubhavadars Sriyuths / Smts. | Sy. No. | Whether Dry/Wet/ Garden | Extent | Kharab Land | Remaining Extent | Assessments | Extent Proposed | Boundaries | | | |
|---|---|---|---|---|---|---|---|---|---|---|---|---|
| | | | | A - G | A - G | A - G | Rs. Ps. | for acquisition | East | West | North | South |
| 1. | Govt | 53 | KARAB, WET,DRY | 3-24 | 0-04 | 3-20 | 6-27 | 3-00 | RL 53 | 55/1 | Gangondana halli | 55/2 |
| 2. | I.T.I.House Building Co-op Society & Govt. | 54 | DRY | 3-09 | 0-06 | 3-03 | 4-22 | 0-26 | 52 | 55 | 52 | RL 54 |
| 3. | Govt | 55/1 | WET/ GARDEN | 0-37 | 0-02 | 0-34<br>0-01 | 1-79<br>0-06 | 0-07 | 53 | RL 55/1 | Gangondana halli | RL 55/1 |
| 4. | Pillappa Bin Ramanna, Puttaiah, Chinnaswamy, Anjanappa, Papanna, Mariyappa, Motappa, Narayanamma, Bhagyamma kom Late Chinnaswamy Gopalaiah bin Late Venkatappa, Ramaswamy bin late Venkatappa & Govt. | 55/2 | GARDEN | 7-03 | 0-01<br>0-12<br>0-13 | 6-30 | 14-18 | 0-37 | 52, 54 | RL 55/2 | 53 | RL 55/2 |
| | | | | | | | **Total** | **4-30** | | | | |

**MALAGALA**

| Sl. No. | Name of the Kathedars/ Anubhavadars Sriyuths / Smts. | Sy. No. | Whether Dry/Wet/ Garden | Extent | Kharab Land | Remaining Extent | Assessments | Extent Proposed for acquisition | East | West | North | South |
|---|---|---|---|---|---|---|---|---|---|---|---|---|
| 1. | Chinnappa bin Ankegowda, Kempaiah, Bommalingaiah, Karisiddappa, | 25/1 | DRY | 4-28 | 0-13 | 4-15 | 5-07 | 0-32 | RL 25/1 | RL 25/1 | 25/2 | 23 |
| 2. | Puttamma Hathva Cheef Trust kom Bha Samskruthika Vidhyapeeta | 25/2 | DRY | 2-13 | 0-02 | 2-11 | 2-65 | 1-20 | RL 25/2 | RL 25/2 | 22 | 25/1 |
| | | | | | | | **Total** | **2-12** | | | | |
| | | | | | | | **Grand Total** | **7-02** | | | | |

Land Acquisition Officer,
Bangalore Development Authority, Bangalore

Deputy Commissioner,
Bangalore Development Authority Bangalore

Commissioner,
Bangalore Development Authority, Bangalore

P.D. 20

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ-2 ಬಿಜಾಪುರ**
**ಪ್ರಕರಣ ಸಂಖ್ಯೆ:ಕಾಅಪ:ಕಾನಪ:53/2005, ದಿನಾಂಕ: 29ನೇ ಮಾರ್ಚ್ 2005**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

ಅರ್ಜಿದಾರರು:
1. ರೇವಣಸಿದ್ದ ರಂಗಪ್ಪ, ಮಾನೆ ವ:ವಯಸ್ಕ ಉ:ಕೂಲಿ ಸಾ॥ಝಳಕಿ ತಾ॥ಇಂಡಿ ಜಿ॥ಬಿಜಾಪುರ
2. ಶರಣಮ್ಮ ರೇವಣಸಿದ್ದ ಮಾನೆ ವ:ವಯಸ್ಕಳು ಉ:ಮನೆಗೆಲಸ ಸಾ॥ ಮೇಲಿನಂತೆ

ಪ್ರತಿವಾದಿಗಳು:
1. ಬಾಹುಬಲಿ ಜೆ. ಪಂಡಿತ ವ:ವಯಸ್ಕ ಉ:ಲಾರಿಮಾಲೀಕರು ಸಾ॥ ಫೈನಲ್ ಪ್ಲಾಟ್ ನಂ.ಯ6 ಗುರೂಜಿ ಮಾರ್ಗ ಪುಣೆ (ಮಹಾರಾಷ್ಟ್ರ)
2. ದಿ ನ್ಯೂ ಇಂಡಿಯಾ ಇನ್ಸೂರೆನ್ಸ್ ಕಂ. ಲಿ., ವಿಭಾಗ ಅಧಿಕಾರಿ ಗುಲ್ಬರ್ಗಾ.

**ಪ್ರಕಟಣೆ**

ಶ್ರೀ:ಶ್ರೀಮತಿ (1) ರೇವಣಸಿದ್ದ, ರಂಗಪ್ಪ ಮಾನೆ (2) ಶರಣಮ್ಮ ರೇವಣಸಿದ್ದ ಮಾನೆ ಇವರುಗಳಾದ ತಾವು ಮೃತ ರಂಗನಾಥ ಅಲಿಯಾಸ್ ರಘುನಾಥ ಇವರ ತಂದೆ ಮತ್ತು ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ರಂಗನಾಥ, ಅಲಿಯಾಸ್ ರಂಗನಾಥ ಇವರು ಒಂದನೇ ಪ್ರತಿವಾದಿಗಳಾದ ಬಾಹುಬಲಿ ಜೆ. ಪಂಡಿತ ಇವರ ಲಾರಿ ರಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಪಿ.ಆರ್. 549 — ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-2 ಬಿಜಾಪುರ ಜಿಲ್ಲೆ ಬಿಜಾಪುರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ-2 ಬಿಜಾಪುರ**
**ಪ್ರಕರಣ ಸಂಖ್ಯೆ:ಕಾಅಪ:ಕಾನಪ:ಮಪ್ರ:ಎಸ್ಆರ್-50/2005, ದಿನಾಂಕ: 18ನೇ ಮಾರ್ಚ್ 2005**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

ಅರ್ಜಿದಾರರು:
1. ಅಂಬವ್ವಾ ಗಂ. ಬೋರಣ್ಣಾ ನರಾಳೆ. ವಯಸ್ಸು 50 ವರ್ಷ ಉ:ಕೂಲಿ ವಾಸಸ್ಥಳ: ಶಿರಶ್ಯಾಡ ತಾ॥ ಇಂಡಿ ಜಿ: ವಿಜಾಪೂರ

ಪ್ರತಿವಾದಿಗಳು:
1. ಸಿದ್ದಲಿಂಗಯ್ಯ ತಂ ರೇವಯ್ಯ ಉರ್ಫ ರೇವಣಯ್ಯ ಮಠ. ವಾಸ: ಶಿರಶ್ಯಾಡ, ತಾ:ಇಂಡಿ ಜಿ: ಬಿಜಾಪೂರ.

**ಪ್ರಕಟಣೆ**

ಶ್ರೀ:ಶ್ರೀಮತಿ ಅಂಬವ್ವಾ ಗಂ ಬೋರಣ್ಣಾ ನರಾಳೆ, ಇವರುಗಳಾದ ತಾವು ಮೃತ ರಮೇಶ ಬೋರಣ್ಣಾ ನರಾಳೆ ಇವರ ತಾಯಿ ಮತ್ತು - ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ರಮೇಶ ಬೋರಣ್ಣಾ ನರಾಳೆ ಇವರು ಒಂದನೇ ಪ್ರತಿವಾದಿಗಳಾದ ಸಿದ್ದಲಿಂಗಯ್ಯ ತಂ. ರೇವಯ್ಯ ಉರ್ಫರೇವಣಯ್ಯ ಮಠ ಇವರ - ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**

ಪಿ.ಆರ್. 550 — ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-2 ಬಿಜಾಪುರ ಜಿಲ್ಲೆ ಬಿಜಾಪುರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ-2 ಬಿಜಾಪುರ**
**ಪ್ರಕರಣ ಸಂಖ್ಯೆ:ಕಾಅಪ:ಕಾನಪ:ಮಪ್ರ:ಎಸ್ಆರ್-51/2005, ದಿನಾಂಕ: 18ನೇ ಮಾರ್ಚ್ 2005**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

ಅರ್ಜಿದಾರರು:
1. ರುಕಮಾಬಾಯಿ ಗಂ. ಶಿವಾನಂದ ಲಮಾಣಿ @ ರಾಠೋಡ, ವಾಸ: ನೆಬಗೇರಿ ತಾ: ಮುದ್ದೇಬಿಹಾಳ ಜಿ: ಬಿಜಾಪೂರ.

ಪ್ರತಿವಾದಿಗಳು:
1. ಎಚ್.ಕೆ. ಗೌಡಾ, ಪಿ.ಎ. ಹೋಲ್ಡರ್ ಆಫ್ ಗಂಗಾಹನುಮಾಯಿ ತಂದೆ ಅಂಜನಪ್ಪ ವಾಸ: ಹಳ್ಳೂರ ತಾ: ತುಮಕೂರು ಜಿ:ತುಮಕೂರು ನೌ ಆ್ಯಟ್ ವಾಸ: ನೇಬಗೇರಿ ತಾ:ಮುದ್ದೇಬಿಹಾಳ ಜಿ:ಬಿಜಾಪೂರ.
2. ದಿ ಮ್ಯಾನೇಜರ್ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಬಿಜಾಪೂರ.

**ಪ್ರಕಟಣೆ**

ಶ್ರೀ:ಶ್ರೀಮತಿ ರುಕಮಾಬಾಯಿ ಗಂ ಶಿವಾನಂದ ಲಮಾಣಿ ರಾಠೋಡ ಇವರುಗಳಾದ ತಾವು ಮೃತ ಪ್ರೇಮಾಬಾಯಿ ಶಿವಾನಂದ ಲಮಾಣಿ ಇವರ ತಾಯಿ ಮತ್ತು - ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಪ್ರೇಮಾಬಾಯಿ ಶಿವಾನಂದ ಲಮಾಣಿ ಇವರು ಒಂದನೇ ಪ್ರತಿವಾದಿಗಳಾದ ಎಚ್.ಕೆ. ಗೌಡಾ ಇವರ ಟ್ರ್ಯಾಕ್ಟರ ನಂ. KA-06 T 6342/6343 ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರು**

ಪಿ.ಆರ್. 551 — ಕಾರ್ಮಿಕ ಪರಿಹಾರ ಆಯುಕ್ತರು, ಉಪ ವಿಭಾಗ-2 ಬಿಜಾಪುರ ಜಿಲ್ಲೆ ಬಿಜಾಪುರ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಳ್ಳಾರಿ ಉಪ ವಿಭಾಗ-1 ಬಳ್ಳಾರಿ**

**ಪ್ರಕರಣ ಸಂಖ್ಯೆ:ಕಾಅಪ:ಕಾನಪ:ಫ್ಯಾ:ಸಿಆರ್-98/2005, ದಿನಾಂಕ: 28ನೇ ಮಾರ್ಚ್ 2005**

**ಅರ್ಜಿದಾರರು**

1. ಶ್ರೀಮತಿ ನಾಗಮ್ಮ ಗಂಡ ತಿಮ್ಮಪ್ಪ ವಯಸ್ಸು 33 ವರ್ಷ ವೃತ್ತಿ ಬಿಸಿಲಹಳ್ಳಿ 17ನೇ ವಾರ್ಡ್, ಬಳ್ಳಾರಿ.
2. ಶ್ರೀ ತಿಮ್ಮಪ್ಪ, ತಂದೆ ಯು.ಕೆ. ಕಳಸಪ್ಪ ವಯಸ್ಸು 35 ವರ್ಷ ವಾಸ: ಬಿಸಿಲಹಳ್ಳಿ 17ನೇ ವಾರ್ಡ್ ಬಳ್ಳಾರಿ.

**ವಿರುದ್ಧ**

**ಪ್ರತಿವಾದಿಗಳು**

1. ಶ್ರೀ ಎಸ್. ರಾಮಾಂಜಿನಪ್ಪ, ತಂ: ತಿಮ್ಮಾರೆಡ್ಡಿ, ಟ್ರಾಕ್ಟರ್ ಟ್ರೈಲರ್ ಮಾಲೀಕರು, ನಂ.ಕೆಎ-34:ಟಿ-2828 ಮತ್ತು ಕೆಎ-34:ಟಿ:2829, ವಾಸ: ಅಲಕುಂದಿಗ್ರಾಮ, ಬಳ್ಳಾರಿ.
2. ಡಿವಿಜನಲ್ ಮ್ಯಾನೇಜರ್, ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಪಾರ್ವತಿನಗರ, ಮೇನ್‌ರೋಡ್, ಬಳ್ಳಾರಿ.

**ಪ್ರಕಟಣೆ**

ಶ್ರೀಮತಿ ನಾಗಮ್ಮ ಗಂಡ ತಿಮ್ಮಪ್ಪ ಮತ್ತು ಇತರರು ತಾವು ಮೃತ ಶ್ರೀ ಯು.ಕೆ. ಸುಧಾಕರ್, ಹಮಾಲಿ ಇವರು ಪ್ರತಿವಾದಿ ರಾಮಾಂಜಿನಪ್ಪ ಇವರ ಟ್ರಾಕ್ಟರ್ ಟ್ರೈಲರ್‌ನಲ್ಲಿ ಕೆಲಸ ಮಾಡುತ್ತಿದ್ದಾಗ ಮರಣ ಹೊಂದಿರುತ್ತಾರೆಂದು ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಯು.ಕೆ. ಸುಧಾಕರ, ಹಮಾಲಿ ಪ್ರತಿವಾದಿಗಳಾದ ಎನ್. ರಾಮಾಂಜಿನಪ್ಪ ಇವರ ಟ್ರಾಕ್ಟರ್-ಟ್ರೈಲರ್ ನಂ.ಕೆಎ-34:ಟಿ-2828 ಮತ್ತು ಕೆಎ-34:ಟಿ-2829ರಲ್ಲಿ ಕೆಲಸ ಮಾಡುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣಹೊಂದಿದ್ದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಬೇರೆಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲಿ ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಪಿ. ವಿಜಯದೇವ ನಾಯ್ಕ್**

ಪಿ.ಆರ್. 552 ಕಾರ್ಮಿಕ ಅಧಿಕಾರಿ ಬಳ್ಳಾರಿ ಉಪ ವಿಭಾಗ-1 ಬಳ್ಳಾರಿ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ**

**ವಿವಾದ ಸಂಖ್ಯೆ:11:01-02**

**ಅರ್ಜಿದಾರರು**

ಗ್ರಾಮಾಂತರ ಗೃಹನಿರ್ಮಾಣ ಸಹಕಾರ ಸಂಘ (ನಿ) ವಿನೋಬನಗರ, ಶಿವಮೊಗ್ಗ ಇದರ ಪರವಾಗಿ ಸಮಾಪನಾಧಿಕಾರಿಗಳು.

**ಎದುರು ಅರ್ಜಿದಾರರು**

1. ಬಿ.ಆರ್. ಪ್ರಭಾಕರ್, ಬಿನ್ ರಾಮಣ್ಣಗೌಡ, ವಿನೋಬನಗರ, ಶಿವಮೊಗ್ಗ
2. ಎಸ್.ಟಿ. ಹಾಲಪ್ಪ, ಬಿನ್ ತಿಮ್ಮಪ್ಪ, ಪ್ರಿಯದರ್ಶಿನಿ ಬಡಾವಣೆ, 30 ಅಡ್ಡರಸ್ತೆ, ಶಿವಮೊಗ್ಗ.
3. ತಿಮ್ಮಪ್ಪ ಬಿನ್ ಹಾಲಪ್ಪ, ಪ್ರಿಯದರ್ಶಿನಿ ಬಡಾವಣೆ, 30 ಅಡಿರಸ್ತೆ, ಶಿವಮೊಗ್ಗ.

**(ಕರ್ನಾಟಕ ರಾಜ್ಯ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103ರ ಮೇರೆಗೆ ಹೊರಡಿಸಿದ ತೀರ್ಪು ಪೂರ್ವ ಜಪ್ತಿ ಆಜ್ಞೆ)**

**ಪ್ರಸ್ತಾವನೆ:**

ಎದುರು ಅರ್ಜಿದಾರರಾದ ಶ್ರೀ ಬಿ.ಆರ್. ಪ್ರಭಾಕರ ಇವರು ಅರ್ಜಿದಾರರ ಸಂಘದಲ್ಲಿ ಕಾರ್ಯದರ್ಶಿಯಾಗಿ ಕೆಲಸ ನಿರ್ವಹಿಸಿದ ಸಂದರ್ಭದಲ್ಲಿ ಸಂಘದ ಆಸ್ತಿಯಾದ ನಿವೇಶನಗಳನ್ನು ಆಸ್ತಿಯ ಮುಖ ಬೆಲೆಗಿಂತ ಕಡಿಮೆ ಬೆಲೆಗೆ ಅಕ್ರಮವಾಗಿ ಕಾನೂನುಬಾಹಿರ ಕ್ರಯಪತ್ರ ನೋಂದಾಯಿಸಿಕೊಟ್ಟಿರುವುದರ ಬಗ್ಗೆ ಸಂಘದ ಆಡಳಿತಾಧಿಕಾರಿಗಳು ಪ್ರಭಾರ ವಹಿಸಿಕೊಂಡು ನಂತರ ನಿವೇಶನಗಳ ಮಂಜೂರಾತಿಯ ವಿಚಾರವಾಗಿ ಪರಿಶೀಲಿಸಿದಾಗ ಸಂಘಕ್ಕೆ ನಷ್ಟ ಉಂಟು ಮಾಡಿರುವ ಬಗ್ಗೆ ಈ ನ್ಯಾಯಾಲಯದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 70 ರಡಿಯಲ್ಲಿ ದಾವಾ ಹೂಡಿದ್ದು, ಈ ದಾವೆಯ ಇತ್ಯರ್ಥಕ್ಕೂ ಪೂರ್ವದಲ್ಲಿ ಮಧ್ಯಂತರ ಅರ್ಜಿ ನಂ.7ನ್ನು ಸಲ್ಲಿಸಿ 1ನೇ ಎದುರುದಾರರ ಸ್ಥಿರಾಸ್ತಿಯನ್ನು ಕಾಯ್ದೆ ಕಲಂ 103 ರಡಿಯಲ್ಲಿ ತೀರ್ಪು ಪೂರ್ವ ಜಪ್ತಿ ಆದೇಶವನ್ನು ನೀಡಲು ಪ್ರಾರ್ಥಿಸಿರುತ್ತಾರೆ. ಈ ಮೇರೆಗೆ 1ನೇ ಎದುರು ಅರ್ಜಿದಾರರಾದ ಶ್ರೀ ಬಿ.ಆರ್. ಪ್ರಭಾಕರ್, ಶಿವಮೊಗ್ಗ ಇವರಿಗೆ ಸಹಕಾರ ಸಂಘಗಳ ಕಾಯ್ದೆ ಕಲಂ 103ರನ್ವಯ ಷರತ್ತು ಪೂರ್ವ ಜಪ್ತಿ ಆಜ್ಞೆಯನ್ನು ದಿನಾಂಕ:31.7.2002 ರಂದು ಈ ನ್ಯಾಯಾಲಯ ಹೊರಡಿಸಿದೆ. ಸದರಿ ಆಜ್ಞೆಯ ಪ್ರತಿಯನ್ನು 1ನೇ ಎದುರುದಾರರಿಗೆ ಖುದ್ದು ಜಾರಿ ಮಾಡಲಾಗಿದೆ. ಆಜ್ಞೆಯ ಪ್ರತಿಯನ್ನು ಪಡೆದು, ಅದರಲ್ಲಿನ ಷರತ್ತುಗಳನ್ನು ಪೂರೈಸಲು ಈ ದಾವಾದಲ್ಲಿನ 1ನೇ ಎದುರುದಾರರು ವಿಫಲರಾಗಿರುವುದರಿಂದ ಹಾಗೂ ಈ ನ್ಯಾಯಾಲಯದಲ್ಲಿ ಮಧ್ಯಂತರ ಅರ್ಜಿ ಸಂ.7ಕ್ಕೆ ದಿನಾಂಕ:19.3.2005 ರಂದು ದಿನಾಂಕ:31.7.2002ರಂದು ಹೊರಡಿಸಲಾಗಿರುವ ಷರತ್ತು ಪೂರ್ವ ಜಪ್ತಿ ಆಜ್ಞೆಯನ್ನು ಸ್ಥಿರೀಕರಣಗೊಳಿಸಲು (ಖಾಯಂಗೊಳಿಸಿ) ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ಕ್ರ. ಸನಿಶಿ 24:ಎಬಿಎನ್:ಎಬಿಜೆ:02-03, ದಿನಾಂಕ: 19ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಶಿವಮೊಗ್ಗ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರಾದ ನಾನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 1ನೇ ಎದುರು ಅರ್ಜಿದಾರರಾದ ಶ್ರೀ ಬಿ.ಆರ್. ಪ್ರಭಾಕರ್, ಬಿನ್ ರಾಮಣ್ಣಗೌಡ ಇವರಿಗೆ ಸೇರಿದ ಈ ಕೆಳಕಂಡ "ಅನುಸೂಚಿ"ಯಲ್ಲಿ ತೋರಿಸಿದ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯ ತೀರ್ಪನ್ನು ಕಾಯ್ದಿರಿಸಿ ದಿನಾಂಕ:31.7.2002ರ ಷರತ್ತು ಪೂರ್ವಕ ಜಪ್ತಿ ಆಜ್ಞೆಯನ್ನು ಸ್ಥಿರೀಕರಿಸಿ (ಖಾಯಂಗೊಳಿಸಿ) ಆದೇಶಿಸಿದೆ.

ಈ ಆದೇಶದ ಅನುಸೂಚಿಯಲ್ಲಿರುವ ಸ್ವತ್ತುಗಳನ್ನು ಪಡೆಯುವ ಅಥವಾ ಖರೀದಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ಷರತ್ತು ಪೂರ್ವಕ ಜಪ್ತಿ ಆಜ್ಞೆಗೆ ಒಳಪಡುವುದು ಎಂದು ಸಹ ಆದೇಶಿಸಿದೆ.

